ಸದಸ್ಯತ್ವ (ನೊಂದಣಿ) ಶುಲ್ಕಃ ಪಾಲಿಕೆಯ ಜಾಹೀರಾತು ಸದಸ್ಯತ್ವ ಹೊಂದಲು ಪ್ರತಿ ಮೂರು ವರ್ಷಗಳಿಗೊಮ್ಮೆ ಪಾಲಿಕೆಗೆ ಪಾವತಿ ಮಾಡಬೇಕಿರುವ ಪಾಲಿಕೆ ನಿಗಧಿಪಡಿಸಿದ ಶುಲ್ಕ.

ಫೂಟ್ ಓವರ್ ಬ್ರಿಡ್ಜ್ ಜಾಹೀರಾತು (Foot over Bridge Advertisement): ಅಥವಾ ಪಾದಚಾರಿ ಮೇಲು ಸೇತುವೆ ಮೇಲಿನ ಜಾಹೀರಾತುಃ ಪಾದಚಾರಿ ಮೇಲು ಸೇತುವೆ ಕಾಲುದಾರಿಗಳ ಮೇಲೆ ಹಾಗೂ ಇಕ್ಕೆಲೆಗಳಲ್ಲಿ ಪ್ರದರ್ಶಿಸುವ ಜಾಹೀರಾತು.

ಹೊಳೆಯುವ ಲಾಂಛನವುಳ್ಳ ಪೆಟ್ಟಿಗೆ ಜಾಹೀರಾತುಃ ಪಾರದರ್ಶಕ ಅಥವಾ ತಿಳಿಯಾದ ಪ್ಲಾಸ್ಟಿಕ ಹಾಳೆಯ ಮೇಲ್ಮೈಯುಳ್ಳ ಲೋಹದ ಹಾಳೆಯ ಪೆಟ್ಟಿಗೆಯ ಹಿಂಭಾಗದಿಂದ ವಿದ್ಯುತ್ ದೀಪ ಬೆಳಗಿಸಿ ಪ್ರದರ್ಶಿಸುವ ಜಾಹೀರಾತು. ಇಂತಹ ಜಾಹೀರಾತುಗಳನ್ನು ಈ ಕೆಳಕಂಡಂತೆ ವರ್ಗೀಕರಿಸಲಾಗಿದೆ.

(i) ಸ್ಥಿರವಾದ ಹೊಳೆಯುವ ಲಾಂಛನದ ಜಾಹೀರಾತು ಃ ಹಿಂದಿನ ಭಾಗದಿಂದ ಪ್ರಕಾಶಗೊಳಿಸುವ ಲೋಹದ ಪೆಟ್ಟಿಗೆಯ ಮೇಲೆ ಪಾರದರ್ಶಕ ಅಥವಾ ತಿಳಿಯಾದ ಪ್ಲಾಸ್ಟಿಕ್ ಹಾಳೆಯ ಮೇಲೆ ಪ್ರದರ್ಶಿಸುವ ಜಾಹೀರಾತು.

(ii) ಯಾಂತ್ರಿಕವಾಗಿ ಹೊಳೆಯುವ ಲಾಂಛನವುಳ್ಳ ಜಾಹೀರಾತುಃ ಸಮತಲದಲ್ಲಿ ಚಕ್ರಾಕಾರದಲ್ಲಿ ಸುತ್ತುತ್ತಿರುವ ಎರಡು ಅಥವಾ ಹೆಚ್ಚಿನ ಸಂಖ್ಯೆಯ ಮೇಲ್ಮೈಗಳ ಮೇಲೆ ಸ್ಥಿರಗೊಳಿಸಿದ ಹೊಳೆಯುವ ಲಾಂಛನದ ಮೂಲಕ ಪ್ರದರ್ಶಿಸುವ ಜಾಹೀರಾತು.

ಗ್ಯಾಂಟ್ರಿ ಜಾಹೀರಾತು ಃ ಅಂದರೆ ಲೋಹದಿಂದ ತಯಾರಿಸಿದ ಮತ್ತು ಮೇಲ್ಭಾಗವನ್ನು ತೊಲೆಯಿಂದ ಜೋಡಿಸಲ್ಪಟ್ಟ ರಸ್ತೆಯ ಎರಡೂ ಬದಿಗಳಿಲ್ಲಿರುವ ಕಂಬಗಳ ಮೇಲೆ ಅಳವಡಿಸಿರುವ ಗ್ಯಾಂಟ್ರಿಗಳ ಮೇಲೆ ಸಂಚಾರದ ವಿರುದ್ಧ ದಿಕ್ಕಿನಲ್ಲಿರುವ ರಸ್ತೆಯ ಮೇಲೆ ಪ್ರದರ್ಶಿಸುವ ಜಾಹೀರಾತುಗಳು.

ಫಲಕಗಳ ಜಾಹೀರಾತು (Hoardings Advertisement) ಃ ಪ್ರಚಾರದ ದೃಷ್ಟಿಯಿಂದ ಅಥವಾ ಮಾಹಿತಿ ನೀಡಿ ಜನರನ್ನು ಒಂದು ಸ್ಥಳ, ವ್ಯಕ್ತಿಗಳಿರುವಲ್ಲಿಗೆ, ಸಾರ್ವಜನಿಕ ಮನರಂಜನಾ ಕಾರ್ಯಕ್ರಮಕ್ಕೆ ಅಥವಾ ಮಾರಾಟಕ್ಕಿರುವ ವಸ್ತುಗಳ ವಿಷಯದಲ್ಲಿ ಆಕರ್ಷಿಸುವ ದೃಷ್ಟಿಯಿಂದ, ನೆಲದ ಮೇಲೆ ಅಥವಾ ಕಟ್ಟಡದ ಮೇಲ್ಭಾಗ, ಗೋಡೆಯ ಮೇಲೆ ಅಥವಾ ಪೆರಾಪಿಟ್ ಅಥವಾ ಅದರ ಮೇಲ್ಭಾಗದಲ್ಲಿ ಇರುವ ವಿನ್ಯಾಸದ ಮೇಲ್ಮೈಯಲ್ಲಿ ಯಾವುದೇ ಚಿಹ್ನೆ, ಅಕ್ಷರ ಅಥವಾ ರೇಖಾಚಿತ್ರದ ಮೂಲಕ ಯಾವುದೇ ರೀತಿಯಲ್ಲಿ, ಆದರೆ ಹೊರಾಂಗಣದಲ್ಲಿ ಮಾತ್ರ ಪ್ರದರ್ಶಿಸುವ ಜಾಹೀರಾತು.

ಪರಿತ್ಯಕ್ತ ಫಲಕದ ಜಾಹೀರಾತುಃ ನ್ಯಾಯಸಮ್ಮತ ನವೀಕರಣ ಪರವಾನಿಗೆ ಹೊಂದದೇ ಇರುವ ಅಥವಾ ಪರವಾನಿಗೆ ರದ್ದಾದ ಮೂವತ್ತು ದಿನಗಳೊಳಗಾಗಿ ಜಾಹೀರಾತಿನ, ವಿನಿಲ್, ಟ್ರಾನ್ಸ್‌ಲೈಟ್ ಮುಂತಾದ ಹಾಳೆಗಳನ್ನು ಬದಲಾಯಿಸದೇ ಇರುವ (ಆಡಳಿತಾತ್ಮಕ ವಿಳಂಬ ಹೊರತು ಪಡಿಸಿ) ಜಾಹೀರಾತು. ಜಾಹೀರಾತು ಪ್ರದರ್ಶನಕ್ಕೆ ನೀಡಿದ ಪರವಾನಿಗೆ ರದ್ದುಗೊಳಿಸಿರುವ ಅಥವಾ ತಿರಸ್ಕರಿಸಲ್ಪಟ್ಟ ಏಜೆನ್ಸಿಗಳ ಜಾಹೀರಾತುಗಳೂ ಈ ನಿರೂಪಣೆಯ ವ್ಯಾಪ್ತಿಯಲ್ಲಿ ಒಳಗೊಂಡಿವೆ.

ಸಮ್ಮಿಶ್ರ ಜಾಹೀರಾತುಗಳ ಫಲಕಗಳುಃ ವಿವಿಧ ರೀತಿಯ ಫಲಕಗಳು ಅಂದರೆ ಪ್ರಕಾಶಿತವಲ್ಲದ, ಪ್ರಕಾಶಿತ ಮತ್ತು ಭಾಗಶಃ ನಿಯಾನ್ ಲಕ್ಷಣಗಳನ್ನು ಹೊಂದಿರುವ ಫಲಕಗಳನ್ನು ಜೋಡಿಸಿರುವ ಫಲಕ. ಇಂತಹ ಫಲಕಗಳಿಗೆ ಅನುಮತಿ ನೀಡುವಾ ಫಲಕದ ವಿನ್ಯಾಸ ಮತ್ತು ಸುರಕ್ಷಿತಾ ಪ್ರಮಾಣ, ಸಾರ್ವಜನಿಕ ಸ್ಥಳಗಳಲ್ಲಿ, ಸಾರ್ವಜನಿಕರ ಸುರಕ್ಷತಾ ಪ್ರಮಾಣದಲ್ಲಿರುವ ಬಗ್ಗೆ ಆಯುಕ್ತರು ಖಚಿತಪಡಿಸಿಕೊಳ್ಳತಕ್ಕದ್ದು.

ಜಾಹೀರಾತು ಫಲಕಗಳನ್ನು ಮುಂದುವರೆದಂತೆ ಈ ಕೆಳಕಂಡಂತೆ ವರ್ಗೀಕರಿಸಲಾಗಿದೆ.

ಪ್ರಕಾಶಿತವಲ್ಲದ ಜಾಹೀರಾತು ಫಲಕ ಃ ಜಾಹೀರಾತು ಫಲಕವನ್ನು ಬೆಳಗಿಸಲು ಆದರ ಎದುರಿಗೆ ವಿದ್ಯೂತ್ ದೀಪವಿಲ್ಲದ ಫಲಕ

ಪ್ರಕಾಶಿತ ಜಾಹೀರಾತು ಫಲಕಃ ವಿದ್ಯುತ್ ದೀಪಗಳನ್ನು ಹೊಂದ್ದಿದು, ರಾತ್ರಿಯ ಸಮಯದಲ್ಲಿ ದೀಪಗಳನ್ನು ಬೆಳಗಿಸುವ ಮೂಲಕ ಪ್ರಕಾಶಗೊಳ್ಳುವ, ಸೂರ್ಯಾಸ್ತದ ನಂತರವೂ ಗೋಚರಿಸುವ ಜಾಹೀರಾತು ಫಲಕ.

ಟ್ರೈವಿಜನ್ ಜಾಹೀರಾತು (Trivision Advertisement) (Tri-Ad): ಒಂದು ಮೇಲ್ಮೈನಂತರ ಇನ್ನೊಂದು ಮೇಲ್ಮೈ ಗೋಚರಿಸುವಂತೆ ಸಮಕಾಲಿಕವಾಗಿ ಸುತ್ತುತ್ತಿರುವ ತ್ರಿಕೋನಾಕಾರದ ಪಟ್ಟಿಯ ಮೇಲೆ ಪ್ರದರ್ಶಿಸುವ ಜಾಹೀರಾತು. ತ್ರಿಕೋನಾಕಾರದ ಮೂರು ಮೇಲ್ಭಾಗಗಳ ಮೇಲೆ ಮೂರು ಬೇರೆ ಬೇರೆ ಜಾಹೀರಾತು ಸಂದೇಶಗಳನ್ನು ಪ್ರದರ್ಶಿಸಲಾಗುತ್ತದೆ. ಇವು ಪ್ರಕಾಶಿತವಿರಬಹುದು ಅಥವಾ ಇಲ್ಲದಿರಬಹುದು.

ಬ್ಯಾಲಿಟ್ (ಹಿಂದಿನಿಂದ ಪ್ರಕಾಶಿತ ಹೊಂದುವ) ಜಾಹೀರಾತು ಫಲಕಃ ವಿದ್ಯುತ್ ದೀಪದ ಮುಂಭಾಗದಲ್ಲಿ ಅಳವಡಿಸಿದ ಮುದ್ರಿತ ವಿನೈಲ್ ಹಾಳೆಯ ಜಾಹೀರಾತು ಫಲಕ. ಇದು ಹಿಂದಿನ ಭಾಗದಿಂದ ಪ್ರಕಾಶಿಸಲ್ಪಡುತ್ತದೆ.

ಯೂನಿಪೋಲ್/ಮಾನೋಪೋಲ್/ಏಕ ಕಂಬ ಫಲಕಗಳುಃ ಒಂದು ರೀತಿಯ ಹಿಂದಿನ ಪರಂಪರೆಯಂತೆ ಪ್ರದರ್ಶಿಸುವ ಜಾಹೀರಾತು. ಇಲ್ಲಿ ವಿನ್ಯಾಸದ ಆಧಾರಕ್ಕಾಗಿ ಹೆಚ್ಚಿನ ಸಂಖ್ಯೆಯಲ್ಲಿ ಕಂಬಗಳನ್ನು ಉಪಯೋಗಿಸುವ ಬದಲಾಗಿ, ಒಂದೇ ಸ್ಟೀಲ್ ಕೊಳವೆಯ ಆಧಾರದ ಮೇಲೆ ವಿನ್ಯಾಸವನ್ನು ಅಳವಡಿಸಿ ಇದರ ಮೇಲೆ ಜಾಹೀರಾತನ್ನು ಪ್ರದರ್ಶನಗೊಳಿಸಲಾಗುತ್ತದೆ.

ನಿಯಾನ್ ಜಾಹೀರಾತು ಫಲಕಗಳುಃ ರಾತ್ರಿಯ ಸಮಯದಲ್ಲಿ ಮಾತ್ರ ಚಾಲನೆಗೊಳ್ಳುವ ನಿಯಾನ್ ದೀಪ/ ಬಲ್ಬು/ಪ್ರಕಾಶ ಹೊಂದಿರುವ ಜಾಹೀರಾತು ಫಲಕ ಇವುಗಳು ಒಂದು ಅಥವಾ ಹೆಚ್ಚು ವಿವಿಧ ಬಣ್ಣಗಳಲ್ಲಿ ಸಮಕಾಲಿಕವಾಗಿ ಬೆಳಗುತ್ತವೆ.

ಗಾಳಿಯ ಮೂಲಕ (ಬಲೂನುಗಳಲ್ಲಿ)ಪ್ರದರ್ಶಿಸುವ ಜಾಹೀರಾತುಃ ಹೀಲಿಯಂ ಗ್ಯಾಸ್ ತುಂಬಿದ ಬಲೂನುಗಳು ಅಥವಾ ಗಾಳಿಗಿಂತ ಹಗುರವಾದ, ಗಾಳಿಯಲ್ಲಿ ತೇಲುವ ವಾಯುಮಾನಗಳ ಮೇಲೆ ಪ್ರದರ್ಶಿತ ಜಾಹೀರಾತು. ಸಾಮಾನ್ಯವಾಗಿ ಮೂರು ಆಯಾಮಗಳಲ್ಲಿ ಸರಕು, ವಾಣಿಜ್ಯ ಚಿಹ್ನೆ, ಮುದ್ರೆಯುಳ್ಳ ಮುದ್ರಿತ ಜಾಹೀರಾತು ಹೊಂದಿರುವ ಬಲೂನುಗಳನ್ನು ತಂತಿ ಅಥವಾ ಹಗ್ಗ ದಲ್ಲಿ ಕಟ್ಟಿ ಗಾಳಿಯಲ್ಲಿ ಕಟ್ಟಡಗಳ ಮೇಲೆ ತೇಲಿಬಿಡಲಾಗುತ್ತದೆ.

ಹೊರಾಂಗಣ ಜಾಹೀರಾತುಃ ಹೊರ ವಲಯದಲ್ಲಿ ಪ್ರದರ್ಶಿಸುವ ಜಾಹೀರಾತು ಇದನ್ನು ಮನೆ ಹೊರಗಿನ ಜಾಹೀರಾತು ಎದು ಉಲ್ಲೇಖಿ ಸಲಾಗುತ್ತದೆ.

ಹೊರಾಂಗಣ ಜಾಹೀರಾತು ಮಾಧ್ಯಮಃ ಫಲಕಗಳು, ಗ್ಯಾಂಟ್ರಿಗಳು, ಕಟ್ಟಡಕ್ಕೆ ಸುತ್ತಿದ ಜಾಹೀರಾತುಗಳು (Building wraps), ಗಾಳಿಯಲ್ಲಿ ತೇಲುವ ಜಾಹೀರಾತುಗಳು, ಈ ಮಾಧ್ಯಮಗಳ ಮೂಲಕ ಹೊರ ವಲಯದಲ್ಲಿ ಪ್ರದರ್ಶಿಸುವ ಜಾಹೀರಾತುಗಳು.

ಸಂಚಾರಿ ಜಾಹೀರಾತು ಪ್ರದರ್ಶನಃ ಚಲಿಸುತ್ತಿರುವ ಅಥವಾ ಆಯ್ದ ಸ್ಥಳದಲ್ಲಿ ನಿಲ್ಲಿಸಿ ವಾಹನದ ಹಿಂದಿನ ಬದಿಯಲ್ಲಿ ನಿಲ್ಲಿಸಿದ ಅಥವಾ ಸುತ್ತುವ ಅಥವಾ ಒಂದು ವಸ್ತುವಿನ ಬಗ್ಗೆ ಹಲಗೆಯ ಒಂದು ಬದಿ ಅಥವಾ ಎರಡೂ ಬದಿಗಳಲ್ಲಿ ವೀಕ್ಷಿಸಲು ಅನುಕೂಲವಾಗುವಂತೆ ಪ್ರದರ್ಶಿಸುವ ಜಾಹೀರಾತು.

ಫಲಕಃ ಅಂದರೆ ಸಾರ್ವಜನಿಕ ಸ್ಥಳದಲ್ಲಿ, ಜಾಹೀರಾತಿನ ಪ್ರದರ್ಶನಕ್ಕಾಗಿ ಸಾಮಾನ್ಯವಾಗಿ ಸಮತಟ್ಟಾದ ಮೇಲ್ಮೈ ಹೊಂದಿರುವ ಅಂದರೆ ಗೋಡೆ ಕಾಂಪೌಂಡ್, ಪೆರಾಪಿಟ್, ಫಲಕ ಮುಂತಾದವುಗಳ ಮೇಲೆ ಅಂಟಿಸುವ ಕಾಗದದ ಹಾಳೆ ಅಥವಾ ಇತರೇ ವಸ್ತು.

ಪೊಲೀಸ್ ಕಿಯೋಸ್ಕ್ ಜಾಹೀರಾತುಃ ಹಲವು ಮೇಲ್ಮೈವುಳ್ಳ (ಷಡ್ಭುಜಾಕೃತಿ ಅಷ್ಟಭುಜಾಕೃತಿ ಇತ್ಯಾದಿ) ಪ್ರಕಾಶಿತ ಹೊಳೆಯುವ ಚಿಹ್ನೆಗಳನ್ನೊಳಗೊಂಡಂತೆ, ಸಂಚಾರ ಪೊಲೀಸ್ ಕಿಯೋಸ್ಕ್ ಮೇಲ್ಛಾವಣಿಯ ಮೇಲೆ ಅಥವಾ ಸಂಚಾರ ದಿಕ್ಸೂಚಿಗಳಿರುವ ಸಮೀಪದಲ್ಲಿ ಪ್ರದರ್ಶಿಸುವ ಜಾಹೀರಾತು.

ದೂರವಾಣಿ ಕಿಯೋಸ್ಕ್ ಜಾಹೀರಾತುಃ ಸಾರ್ವಜನಿಕ ದೂರವಾಣಿ ಕಿಯೋಸ್ಕ್ ಅಥವಾ ಅಂಗಡಿಗಳ ಮೇಲೆ ಪ್ರದರ್ಶಿಸುವ ಜಾಹೀರಾತು.

ಸ್ಥಂಬ / ಕಂಬ ಜಾಹೀರಾತು (Pole Advertisement): ಜಾಹೀರಾತುಗಳಿಗೆಂದೇ ಇರುವ ಸ್ಥಂಬದ / ಕಂಬದ ಮೇಲೆ ಅಳವಡಿಸಿದ ಹಲಗೆಗಳ, ಒಂದು ಅಥವಾ ಎರಡೂ ಬದಿಗಳಲ್ಲಿ ಪ್ರದರ್ಶಿಸುವ ಜಾಹೀರಾತುಗಳು.

ನಿಗಧಿತ ಅರ್ಜಿ ನಮೂನೆಃ ಜಾಹೀರಾತನ್ನು ಅಳವಡಿಸಲು ಮತ್ತು ಪ್ರದರ್ಶಿಸಲು ಪಡೆಯಬೇಕಾದ ಪರವಾನಿಗೆಗಾಗಿ ಅಥವಾ ಹೊರ ಮಾಧ್ಯಮಗಳಿಗೆ ಈಗಾಗಲೇ ನೀಡಿರುವ ಪರವಾನಿಗೆಯ ನವೀಕರಣಕ್ಕಾಗಿ ಪಾಲಿಕೆಗೆ ಸಲ್ಲಿಸಲು ಆಯುಕ್ತರಿಂದ ನಿಗಧಿಪಡಿಸಿರುವ ಅರ್ಜಿ ನಮೂನೆ.

ಸಾರ್ವಜನಿಕರ ಉಪಯೋಗಕ್ಕಾಗಿರುವ ಜಾಹೀರಾತುಃ ಸಾರ್ವಜನಿಕರ ಉಪಯೋಗಕ್ಕಾಗಿರುವ ಕಟ್ಟಡ ಅಥವಾ ವಿನ್ಯಾಸ, ಅಂದರೆ ಸಾರ್ವಜನಿಕ ಶೌಚಾಲಯ ಇತ್ಯಾದಿಗಳಲ್ಲಿ ಪ್ರದರ್ಶಿಸುವ ಜಾಹೀರಾತು.

ಸಾರ್ವಜನಿಕ ಉದ್ಯಾನವನಃ ರಾಜ್ಯ ಸರ್ಕಾರ ಅಥವಾ ಪಾಲಿಕೆ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇತ್ಯಾದಿ ಅಂಗ ಸಂಸ್ಥೆಗಳು ಸಾರ್ವಜನಿಕರ ಮನರಂಜನೆಗಾಗಿ ನಿರ್ವಹಿಸುತ್ತಿರುವ ಉದ್ಯಾನವನಗಳು.

ಕುದುರೆ ಜೂಜು ತೆರಿಗೆಃ ಬೆಂಗಳೂರು ರೇಸ್ ಕೋರ್ಸ್‌ನಲ್ಲಿ ಟರ್ಫ ಕ್ಲಬ್ ನಡೆಸುವ ಕುದುರೆ ರೇಸುಗಳಲ್ಲಿ ಭಾಗವಹಿಸುವ ಕುದುರೆಗಳ ಜಾಹೀರಾತಿನ ಮೇಲೆ ಪಾಲಿಕೆ ಪಡೆಯುವ ಶುಲ್ಕ.

ರಸ್ತೆ ವಿಭಜಕಗಳ ಜಾಹೀರಾತುಃ ಸಾರ್ವಜನಿಕ ರಸ್ತೆಗಳ ಮಧ್ಯದಲ್ಲಿ ಅಂದರೆ ಮೀಡಿಯನ್‌ನಲ್ಲಿ/ ರಸ್ತೆ ವಿಭಜಕದಲ್ಲಿ ಪ್ರದರ್ಶಿಸುವ ಜಾಹೀರಾತುಗಳು.

ಮನರಂಜನಾ ಮೈದಾನಗಳುಃ ಮಾರಾಟದ ವಸ್ತುಗಳ ಪ್ರದರ್ಶನಗಳು, ಕ್ರೀಡಾ ಕೂಟಗಳು, ಕಲೆ, ಸಾಂಸ್ಕೃತಿಕ ಮತ್ತು ಸಂಗೀತ ಕಾರ್ಯಕ್ರಮಗಳು ಇತ್ಯಾದಿಗಳಿಗೆಂದೇ, ಸರ್ಕಾರದ ಅಥವಾ ಪಾಲಿಕೆಯಸ್ವತ್ತಿನಲ್ಲಿ ನಿಗಧಿಪಡಿಸಿರುವ ಸ್ಥಳಗಳು.

ಪುನರ್ ಪರಿಶೀಲನಾ ಅರ್ಜಿಃ ಹೊರಾಂಗಣ ಜಾಹೀರಾತಿನ ಪ್ರದರ್ಶನ ಮತ್ತು ಅಳವಡಿಕೆಗೆ ಸಲ್ಲಿಸಿದ ಅರ್ಜಿಗೆ ಸಂಬಂಧಿಸಿದಂತೆ ಪಾಲಿಕೆ ನೀಡಿದ ಆದೇಶದ ಪುನರ್ ಪರಿಶೀಲನೆ ಕೋರಿ ಆಯುಕ್ತರಿಗೆ ನಿಗಧಿತ ನಮೂನೆಯಲ್ಲಿ ಸಲ್ಲಿಸುವ ಅರ್ಜಿ.

ಎಸ್.ಎ.ಎಸ್ (ಜಾಹೀರಾತು) SAS Advt (ಸ್ವಯಂ ಘೋಷಣಾ ಯೋಜನೆ) ಃ ತಮ್ಮದೇ ಜಾಹೀರಾತಿಗೆ ಸ್ವಯಂ ಘೋಷಿತ ತೆರಿಗೆ ಯೋಜನೆ. ಇದು ಒಬ್ಬ ವ್ಯಕ್ತಿಗೆ, ವಾಣಿಜ್ಯ ಸಂಸ್ಥೆಗಳಿಗೆ ಅನ್ವಯಿಸುತ್ತದೆ.

ಸ್ಕ್ರೋಲರ್ ಜಾಹೀರಾತು ಪ್ರದರ್ಶನಃ ಸುರಳಿಯಂತೆ ಸುತ್ತುತ್ತಿರುವ ಮುದ್ರಿತ ಹಾಳೆಯನ್ನು ರೋಲರುಗಳ ಆಧಾರದ ಮೇಲೆ ಉರುಳಿಸಿ ಪೆಟ್ಟಿಗೆಯಂತಿರುವ ಸಾಧನದ ಮೇಲೆ ಪ್ರದರ್ಶಿಸುವ ಜಾಹೀರಾತು. ಇದು ಪ್ರಕಾಶಿತವಿರದಿರಬಹುದು ಅಥವಾ ಪ್ರಕಾಶಿತವಿರಬಹುದು.

ಸ್ವಜಾಹೀರಾತುಃ ಪ್ರಕಾಶಿತ ಅಥವಾ ಪ್ರಕಾಶಿತವಲ್ಲದ ನಾಮಫಲಕ, ಕೇವಲ ಹೆಸರು ಮತ್ತು ಒಂದು ನಿರ್ದಿಷ್ಟ ಕಟ್ಟಡದಲ್ಲಿ ನಡೆಸುತ್ತಿರುವ ವ್ಯವಹಾರ ಅಥವಾ ಸಾಮಾಜಿಕ ಚಟುವಟಿಕೆಗೆ ಸಂಬಂಧಿಸಿದಂತೆ ವಿಳಾಸವನ್ನಷ್ಟೇ ಹೊಂದಿರತಕ್ಕದ್ದು.

ಸ್ಲೈಡುಗಳು ಮತ್ತು ಕಿರು ಚಲನಚಿತ್ರಗಳುಃ ಚಿತ್ರಮಂದಿರಗಳಲ್ಲಿ ಪ್ರದರ್ಶಿಸುವ ಜಾಹೀರಾತು ಸ್ಲೈಡುಗಳು ಅಥವಾ ಜಾಹೀರಾತು ಚಲನಚಿತ್ರಗಳು.

ಅಂಗಡಿ ಮುಂಗಟ್ಟಿನ ಜಾಹೀರಾತುಃ ವ್ಯಾಪಾರ ಅಥವಾ ಅಲ್ಲಿನ ವ್ಯವಹಾರ ನಡೆಸುತ್ತಿರುವ ಸ್ಥಳದಲ್ಲಿ ಮಾರಾಟಕ್ಕಿರುವ ವಸ್ತುಗಳ ಹೆಸರು, ನೀಡುತ್ತಿರುವ ಸೇವೆಯ ವಿವರ ಇವುಗಳ ಬಗ್ಗೆ ಅದೇ ಸ್ಥಳದಲ್ಲಿ ವಿಳಾಸ, ರಸ್ತೆ, ಪ್ರದರ್ಶಿಸುವ ಇತ್ಯಾದಿ ಒಳಗೊಂಡ ಜಾಹೀರಾತು.

ಅಂಗಡಿ ಮುಂಗಟ್ಟಿನ ಸಗಟು (ಬಲ್ಕ) ವಾಣಿಜ್ಯ ಜಾಹೀರಾತುಃ ವಿವಿಧ ವಾಣಿಜ್ಯ ಸಂಸ್ಥೆಗಳು ತಮ್ಮ ವ್ಯಾಪಾರದ ಗುರುತು ಅಥವಾ ಚಿಲ್ಲರೆ ಮಾರಾಟಕ್ಕಿರುವ ಉತ್ಪನ್ನ ಅಥವಾ ಉತ್ಪನ್ನಗಳ ಹೆಸರು ಅಥವಾ ಇತರೇ ಚಿಲ್ಲರೆ ವ್ಯವಹಾರದ ಕುರಿತು, ಚಿಲ್ಲರೆ ಮಾರಾಟ ಅಂಗಡಿಗಳ ಮುಂಗಟ್ಟುಗಳಲ್ಲಿ, ಸದರಿ ಚಿಲ್ಲರೆ ಅಂಗಡಿಯ ಹೆಸರು ಮತ್ತು ವಿಳಾಸದೊಂದಿಗೆ ಪ್ರದರ್ಶಿಸುವ ಜಾಹೀರಾತು.

ಬೀದಿ ಪೀಠೋಪಕರಣಗಳ ಮೇಲಿನ ಜಾಹೀರಾತುಃ ಸಾರ್ವಜನಿಕರ ಉಪಯೋಗಕ್ಕಾಗಿರುವ ವಿನ್ಯಾಸಗಳು ಅಂದರೆ ಬೆಂಚುಗಳು, ಕಸದ ತೊಟ್ಟಿಗಳು, ಹಳಿಗಳು ಮುಂತಾದವುಗಳ ಮೇಲೆ ಪ್ರದರ್ಶಿಸುವ ಜಾಹೀರಾತು.

ತಾತ್ಕಾಲಿಕ ಕಮಾನು ಜಾಹೀರಾತುಃ ಕೆಲವು ವಿಶೇಷ ಸಂದರ್ಭಗಳಲ್ಲಿ ಅಂದರೆ ಗಣ್ಯ ವ್ಯಕ್ತಿಗಳು ಭೇಟಿ ನೀಡುವ ಸಮಯದಲ್ಲಿ ಅವರುಗಳಿಗೆ ಸ್ವಾಗತ ಕೋರಲು ಅಥವಾ ಅಂಗಡಿಗಳು ಮತ್ತು ಸಂಸ್ಥೆಗಳು ಮಾರಾಟವನ್ನು ಹೆಚ್ಚಿಸಲು ಅವುಗಳ ಸ್ಥಳಗಳಲ್ಲಿ ಅಥವಾ ಹತ್ತಿರ ಪ್ರದರ್ಶಿಸುವ ಜಾಹೀರಾತು. ಇಂತಹ ಜಾಹೀರಾತನ್ನು ರಸ್ತೆಯ ಎರಡೂ ಬದಿಗಳಿಗೆ ಹೊಂದಿಕೊಳ್ಳುವಂತೆ ವಿನ್ಯಾಸವನ್ನು ತಾತ್ಕಾಲಿಕವಾಗಿ ಅಳವಡಿಸಿ ಪ್ರದರ್ಶಿಸಲಾಗುತ್ತದೆ. ಇಂತಹ ಪ್ರದರ್ಶನಗಳು ಮೂರು ದಿನಗಳಿಂದ ಒಂದು ತಿಂಗಳವರೆಗೆ ಮಾತ್ರ ಸೀಮಿತವಾಗಿರುತ್ತವೆ.

ತಾತ್ಕಾಲಿಕ ಫಲಕಗಳ ಮೇಲಿನ ಜಾಹೀರಾತುಗಳು: ಗಣ್ಯ ವ್ಯಕ್ತಿಗಳಿಗೆ ಶುಭಾಷಯ ಬಯಸಲು, ರಾಜಕೀಯ ಸಭೆ, ಉತ್ಸವಗಳು, ಶೈಕ್ಷಣಿಕ ಸಭೆಗಳು, ಕ್ರೀಡಾ ಕೂಟ ಅಥವಾ ಲಾಭವನ್ನು ನಿರೀಕ್ಷಿಸದೆಯೇ ಮಾಡುವ ಸಾರ್ವಜನಿಕ ಸಮಾರಂಭಗಳ ಪ್ರಚಾರಕ್ಕಾಗಿ, ತಾತ್ಕಾಲಿಕ ಫಲಕಗಳ ಮೇಲೆ ಪ್ರದರ್ಶಿಸುವ ಜಾಹೀರಾತುಗಳು. ಇವುಗಳ ಪ್ರದರ್ಶನ ಮೂರು ದಿನಗಳಿಗಷ್ಟೇ ಸೀಮಿತವಾಗಿದ್ದು, ವಿಶೇಷ ಸಂದರ್ಭಗಳಲ್ಲಿ ಒಂದು ತಿಂಗಳವರೆಗೆ ವಿಸ್ತರಿಸಲಾಗುವುದು. ಇಂತಹ ಜಾಹೀರಾತುಗಳಿಗಾಗಿ ರಸ್ತೆಗಳ ಮೇಲೆ ಅಥವಾ ಕಾಲುದಾರಿಗಳ ಮೇಲೆ ಯಾವುದೇ ರೀತಿಯ ಗುಂಡಿಗಳನ್ನು ತೋಡಬಾರದು.

ತಾತ್ಕಾಲಿಕ ಕಂಬ ಜಾಹೀರಾತು ಪತಾಕೆಗಳು: ಕಾಲುದಾರಿಗೆ ಹೊಂದಿಕೊಂಡಂತೆ ಕಾಲುದಾರಿಯ ಮೇಲೆ ಅಳವಡಿಸಿದ ಕಂಬದ ಮೇಲೆ, ಗರಿಷ್ಠ 1ಮೀ. X 1.5 ಮೀ ಅಳತೆಯ ಪತಾಕೆಯ ರೂಪದ ಜಾಹೀರಾತು ಪ್ರದರ್ಶನ.

ಸಂಚಾರ ಸಂಕೇತಗಳ ಮೇಲಿನ ಜಾಹೀರಾತು: ನಗರದ ಸಂಚಾರ ಸಂಕೇತಗಳೊಂದಿಗೆ ಸಂಚಾರ ಸಂಕೇತಗಳ ಕೆಳಭಾಗದಲ್ಲಿ ಅಥವಾ ಹಿಂದಿನ ಬದಿಯಲ್ಲಿ, ಆದರೆ ಅದೇ ಸಂಕೇತ ಕಂಬದ ಮೇಲೆ ಪ್ರದರ್ಶಿಸುವ ಜಾಹೀರಾತು.

ಟ್ರಾನ್ಸ್ಮಿಷನ್ ಗೋಪುರ ಜಾಹೀರಾತು: ನಗರದ ಗಡಿಯೊಳಗೆ, ವಿವಿಧ ಮೊಬೈಲ್ ಕಂಪನಿಗಳು ಅಳವಡಿಸುವ ವಾಹಕ (Transmission) ಗೋಪುರಗಳ ಮೇಲೆ ಪ್ರದರ್ಶಿಸುವ ಜಾಹೀರಾತು.

ವಿನೈಲ್ ಅಥವಾ ಫ್ಲೆಕ್ಸ್ ಜಾಹೀರಾತು: ಫಲಕದ ಮೇಲೆ ಚಾಚಿದ ವಿನೈಲ್ ಹಾಳೆಯ ಮೇಲಿನ ಕೈ ಮುದ್ರಿತ ಅಥವಾ ಗಣಕ ಮುದ್ರಿತ ಜಾಹೀರಾತು.

ಗೋಡೆಯ ಮೇಲೆ ಪೇಂಟು/ಬಣ್ಣ ಮಾಡಿದ ಜಾಹೀರಾತು: ಗೋಡೆಯ ಮೇಲೆ ಅಥವಾ ಕಟ್ಟಡದ ವಿನ್ಯಾಸದ ಮೇಲೆ ಅಥವಾ ಯಾವುದೇ ಸಾರ್ವಜನಿಕ ವಿನ್ಯಾಸದ ಮೇಲೆ ಪೇಂಟು /ಬಣ್ಣ ಮಾಡಿದ ಜಾಹೀರಾತು.

ಕಿಟಕಿ ಜಾಹೀರಾತು (Window Advt): ವಾಣಿಜ್ಯ ಸಂಸ್ಥೆಗಳು ತಮ್ಮ ಉತ್ಪನ್ನ ಅಥವಾ ತಾವು ನೀಡುವ ಸೇವೆಯ ಕುರಿತು ಅವರದೇ ಕಟ್ಟಡಗಳ ಕಿಟಕಿಗಳಲ್ಲಿ ಹೊರಗಿನಿಂದ ಗೋಚರವಾಗುವಂತೆ ಪ್ರದರ್ಶಿಸುವ ಜಾಹೀರಾತು, ಇವುಗಳು ಪ್ರಕಾಶಿತವಿರಬಹುದು (ಟ್ರಾನ್ಸ್‌ಮಿಷನ್ ಒಳಗೊಂಡು), ಸ್ಥಿರವಾಗಿರಬಹುದು ಅಥವಾ ಯಾಂತ್ರಿಕವಾಗಿ ಚಲಿಸುತ್ತಿರಬಹುದಾಗಿದೆ.

## ಭಾಗ- II

ಹೊರಾಂಗಣ ಜಾಹೀರಾತುಗಳಿಗೆ ಸಂಬಂಧಿಸಿದಂತೆ ನಿಯಮಗಳು:

A. ವಾಣಿಜ್ಯ ಜಾಹೀರಾತುಗಳ ಅಳವಡಿಕೆ ಮತ್ತು ಪ್ರದರ್ಶನಕ್ಕೆ ನಿಯಮಗಳು:

1. ಸ್ವಚ್ಛತೆ, ಸುರಕ್ಷೆ ಮತ್ತು ಶಾಂತಿ ಕಾಪಾಡುವ ಉದ್ದೇಶದಿಂದ ಪಾಲಿಕೆಯು ಪ್ರಕಟಣೆಯ ಮೂಲಕ:-
   a. ಜಾಹೀರಾತನ್ನು ನಿಷೇಧಿಸಬಹುದು, ಯಾವುದೇ ಬೀದಿ, ಸಾರ್ವಜನಿಕ ರಸ್ತೆ, ಸಾರ್ವಜನಿಕ ಅಥವಾ ಖಾಸಗಿ ಸ್ಥಳ, ಸಾರ್ವಜನಿಕ ಅಥವಾ ಖಾಸಗಿ ಕಟ್ಟಡ, ಗೋಡೆ, ಫಲಕ, ವಿನ್ಯಾಸ, ದೀಪಸ್ಥಂಬಗಳು, ಸಾರ್ವಜನಿಕ ಸ್ಥಳ ಅಥವಾ ರಸ್ತೆಗೆ ಹೊಂದಿಕೊಂಡಿರುವ ಅಥವಾ ಅಲ್ಲಿಂದ ಗೋಚರಿಸುವ ಅಥವಾ ಬದಿಯಲ್ಲಿರುವ ಅಥವಾ ಅಲ್ಲಿಯೇ ಇರುವ ಕಂಬ, ಇವುಗಳ ಮೇಲೆ ಪ್ರದರ್ಶಿಸುವ ಜಾಹೀರಾತುಗಳ ಅಳವಡಿಕೆ, ದಾಖಲಿಸುವುದು, ನಿರ್ಮಿಸುವುದು, ಉಳಿಸುವುದು ಅಥವಾ ಪ್ರದರ್ಶನವನ್ನು ಕ್ರಮಬದ್ಧಗೊಳಿಸಬಹುದಾಗಿದೆ.
   b. ಪ್ರತಿಬಂಧಿತವಲ್ಲದ ಸ್ಥಳಗಳಲ್ಲಿ ಜಾಹೀರಾತುಗಳ ಅಳವಡಿಕೆ, ದಾಖಲಿಸುವುದು, ನಿರ್ಮಿಸುವುದು, ಉಳಿಸುವುದು ಹಾಗೂ ಪ್ರದರ್ಶನಗಳನ್ನು ಕ್ರಮಬದ್ಧಗೊಳಿಸಬಹುದಾಗಿದೆ.
2. ಜಾಹೀರಾತು ಫಲಕವೆಂದರೆ : ಸಾರ್ವಜನಿಕರಿಗೆ ಒಂದು ನಿರ್ದಿಷ್ಟ ಸ್ಥಳ, ವ್ಯಕ್ತಿಗಳು, ಸಾರ್ವಜನಿಕ ಕಾರ್ಯಕ್ರಮ, ಮಾರಾಟದ ವಸ್ತುಗಳ ಕುರಿತು ಮಾಹಿತಿ ನೀಡುವ ಉದ್ದೇಶದಿಂದ, ಮೈದಾನದಲ್ಲಿ, ಕಟ್ಟಡದ ಮೇಲ್ಛಾವಣಿಯ ಭಾಗದಲ್ಲಿ ಅಥವಾ ಪೆರಾಪಿಟ್ ಅಥವಾ ಗೋಡೆಯ ಮೇಲೆ ಹೊರಭಾಗದಲ್ಲಿ ಅಳವಡಿಸುವ ವಿನ್ಯಾಸದ ಮೇಲೆ ಚಿಹ್ನೆಗಳು, ಅಕ್ಷರಗಳು ಅಥವಾ ರೇಖಾಚಿತ್ರಗಳ ಮೂಲಕ ಪ್ರದರ್ಶಿಸಬಹುದಾದ ಮೇಲ್ಮೈ. ಇವುಗಳು ಎರಡಕ್ಕಿಂತ ಹೆಚ್ಚಿನ ಕಂಬಗಳು, ಎರಡು ಕಂಬಗಳು ಅಥವಾ ಒಂದು ಕಂಬದ ಆಧಾರಹೊಂದಿದ್ದು, ಗಟ್ಟಿಮುಟ್ಟಾಗಿ ಅಳವಡಿಸಿದ ಯಾವುದೇ ವಿನ್ಯಾಸದ ಮೈಲ್ಮೈಗಳನ್ನೊಳಗೊಂಡಿರುತ್ತವೆ. ಇಂತಹ ಮೇಲ್ಮೈಯನ್ನು ಹೆಚ್ಚಿನ ಸಂಖ್ಯೆಯ ಜಾಹೀರಾತು ಪ್ರದರ್ಶನಗಳಿಗೆ ಅಂದರೆ ಟ್ರಾಆಡ್, ಟ್ರೈವಿಜನ್ ಮತ್ತು ಸ್ಕ್ರೋಲರ್ ಮುಂತಾದವುಗಳಿಗೆ ಉಪಯೋಗಿಸಬಹುದಾಗಿದೆ.
3. ಯಾವುದೇ ವ್ಯಕ್ತಿ, ಖಾಸಗಿ ಅಥವಾ ಸಾರ್ವಜನಿಕರ ಕಟ್ಟಡಗಳು, ಅಥವಾ ಸ್ವತ್ತುಗಳು, ಗೋಡೆಗಳು, ಪ್ಯಾರಾಪೆಟಗಳು, ಅಥವಾ ಆವರಣಗಳು ಖಾಸಗಿ ಫಲಕಗಳು, ಖಾಸಗಿ ವಿನ್ಯಾಸಗಳು, ಖಾಸಗಿ ಕಟ್ಟಡಗಳಲ್ಲಿರುವ ಕಂಬಗಳು ಅಥವಾ ದೀಪಸ್ಥಂಬಗಳು, ಇವುಗಳ ಮೇಲೆ ಜಾಹೀರಾತುಗಳನ್ನು ಅಳವಡಿಸಲು, ದಾಖಲಿಸಲು, ನಿರ್ಮಿಸಲು, ಸ್ಥಿರಪಡಿಸಲು ಅಥವಾ ಪ್ರದರ್ಶಿಸಲು ಇಚ್ಛಿಸಿದಲ್ಲಿ ಪರವಾನಿಗೆ ಕೋರಿ ಪಾಲಿಕೆಯ ಆಯುಕ್ತರಿಗೆ ಅರ್ಜಿ ಸಲ್ಲಿಸತಕ್ಕದ್ದು, ಹಾಗೂ ನಿರ್ದಿಷ್ಟ ಶುಲ್ಕ ಪಾವತಿ ಮಾಡಿ ಪ್ರತಿ ಬ್ಯಾನರ್‌ಗೆ (Banner) ಮುದ್ರೆ ಪಡೆಯತಕ್ಕದ್ದು.
4. ಅನುಮತಿ ನೀಡಿರುವ ಮಾದರಿಯಲ್ಲಿ ಮತ್ತು ಆಯುಕ್ತರು ನಿಗಧಿಪಡಿಸಿರುವ ಅವಧಿಯನ್ನು ಹೊರತುಪಡಿಸಿ, ಯಾವುದೇ ವ್ಯಕ್ತಿಯು, ಪಾಲಿಕೆಯ ಉದ್ಯಾನವನಗಳಲ್ಲಿ ಅಥವಾ ಪಾಲಿಕೆಯ ಮನರಂಜನಾ ಮೈದಾನಗಳಲ್ಲಿ (ಪ್ರಕಟಿಸಿದ ರೀತಿಯಲ್ಲಿ) ಯಾವುದೇ ಜಾಹೀರಾತವನ್ನು ಅಳವಡಿಸತಕ್ಕದ್ದಲ್ಲ, ದಾಖಲಿಸತಕ್ಕದ್ದಲ್ಲ, ನಿರ್ಮಿಸತಕ್ಕದ್ದಲ್ಲ, ಇಡತಕ್ಕದ್ದಲ್ಲ ಅಥವಾ ಪ್ರದರ್ಶಿಸತಕ್ಕದ್ದಲ್ಲ. ಮತ್ತು ಈ ರೀತಿ ಅಳವಡಿಸಲು, ದಾಖಲಿಸಲು, ಸ್ಥಿರವಹಿಸಲು ಅಥವಾ ಪ್ರದರ್ಶಿಸಲು ಕಾರಣರಾಗತಕ್ಕದ್ದಲ್ಲ.
5. ಜಾಹೀರಾತು ಫಲಕಗಳನ್ನು, ಈ ಮೊದಲು ಪರವಾನಿಗೆ ಪಡೆದು ಅಳವಡಿಸಿರುವ ಇತರೇ ಜಾಹೀರಾತು ಫಲಕಗಳ ವೀಕ್ಷಣೆಗೆ ತಡೆಯಾಗದಂತೆ, ಪ್ರದರ್ಶಿಸಬೇಕು. ಫಲಕ ಅಥವಾ ಅದರ ಮೂಲ ವಸ್ತುಗಳು (ಆಧಾರಗಳು, ಕಂಬಗಳು ಇತ್ಯಾದಿ) ಇತರೇ ಸಂಸ್ಥೆಗಳು ತಮ್ಮ ಉತ್ಪನ್ನಗಳು ಅಥವಾ ಸೇವೆಗಳ ಕುರಿತು ಪ್ರದರ್ಶಿಸಿದ ಜಾಹೀರಾತುಗಳ ಅಥವಾ ಭಾರಿ ವಾಣಿಜ್ಯ ಫಲಕಗಳ ವೀಕ್ಷಣೆಗೆ ತಡೆಯನ್ನುಂಟು ಮಾಡತಕ್ಕದ್ದಲ್ಲ.

6. ಜಾಹೀರಾತು ಫಲಕಗಳ ಪ್ರದರ್ಶನಕ್ಕಾಗಿ ನೀಡಿರುವ ಪರವಾನಿಗೆಯನ್ನು ಪರವಾನಿಗೆ ತಲುಪಿದ 45 ದಿನಗಳೊಳಗಾಗಿ ಉಪಯೋಗಿಸಿಕೊಳ್ಳಬೇಕು. ಪರವಾನಿಗೆಯನ್ನು ಮುಂದುವರಿಸಲು ಕೋರಿ ಸಲ್ಲಿಸಿದ ಅರ್ಜಿಯಲ್ಲಿ ನೀಡಿದ ಕಾರಣಗಳು ಸಮಂಜಸವೆಂದು ಮನದಟ್ಟಾದಲ್ಲಿ, ಆಯುಕ್ತರು, ಏಜೆನ್ಸಿಗೆ ಫಲಕದ ಅಳವಡಿಕೆಗೆ ನೀಡಿರುವ ಪರವಾನಿಗೆಯನ್ನು 30 ದಿನಗಳಿಗೆ ಮೀರದಂತೆ ವಿಸ್ತರಿಸಬಹುದಾಗಿದೆ. ಈ ಅವಧಿಯ ನಂತರ ಆಯುಕ್ತರು ಪರವಾನಿಗೆಯನ್ನು ಮುಂದುವರೆಸತಕ್ಕದ್ದಲ್ಲ. ಆದಾಗ್ಯೂ ಸದರಿ ಏಜೆನ್ಸಿಯವರು ಅವರುಗಳ ವಿವೇಚನೆಗೆ ಒಳಪಟ್ಟಂತೆ ಹೊಸದಾಗಿ ಪರವಾನಿಗೆ ಕೋರಿ ಅರ್ಜಿ ಸಲ್ಲಿಸಬಹುದಾಗಿದೆ.

7. ಯಾವುದೇ ಅನಧಿಕೃತ ಜಾಹೀರಾತಿಗೆ, ನಿರ್ದಿಷ್ಟ ಪಡಿಸಿದ ಪ್ರಮಾಣದಲ್ಲಿ ದಂಡ ವಿಧಿಸಲು ಕಾರಣವಾಗುತ್ತದೆ. ಎಲ್ಲಾ ವಿಧದ ಜಾಹೀರಾತುಗಳಿಗೆ ಸಂಬಂಧಪಟ್ಟಂತೆ, ಯಾವುದೇ ರೀತಿಯ ಉಲ್ಲಂಘನೆ ಕಂಡು ಬಂದಲ್ಲಿ ಆಯುಕ್ತರು ನಿಗಧಿತ ಗರಿಷ್ಠ ಪ್ರಮಾಣಕ್ಕೆ ಕಡಿಮೆ ಇಲ್ಲದಂತೆ ದಂಡ ವಿಧಿಸಬಹುದಾಗಿರುತ್ತದೆ.

8. ಜಾಹೀರಾತು ಫಲಕಗಳು :

**ಸ್ವತ್ತುಗಳ ಹಿಂಬದಿಯಲ್ಲಿ ಅಳವಡಿಸುವ ಜಾಹೀರಾತು ಫಲಕಗಳು ಸ್ವತ್ತುಗಳಲ್ಲಿ ಓಡಾಡುವ ಜನರಿಗೆ ಅಡಚಣೆ ಉಂಟುಮಾಡತಕ್ಕದ್ದಲ್ಲ. ಹೈರೈಜ್ ಬಿಲ್ಡಿಂಗ್‌ಗಳ ಬಳಿ ಜಾಹೀರಾತು ಫಲಕಗಳನ್ನು ಅಳವಡಿಸಲು ಅಗ್ನಿಶಾಮಕ ಇಲಾಖೆಯಿಂದ ನಿರಾಪೇಕ್ಷಣ ಪತ್ರ ಪಡೆದುಕೊಳ್ಳತಕ್ಕದ್ದು. ಮುಂದುವರೆಸುತ್ತಾ, ಸ್ವತ್ತುಗಳ ಹಿಂಬದಿಯಲ್ಲಿ ಅಳವಡಿಸುವ ಜಾಹೀರಾತು ಫಲಕಗಳು ಪಾದಚಾರಿ ಮಾರ್ಗದ ಕಡೆಗೆ ಮುಖ ಮಾಡತಕ್ಕದ್ದಲ್ಲ ಅಥವಾ ಪಕ್ಕದ ಸ್ವತ್ತಿನ ಕಡೆಗೆ ತಿರುಗಿಸತಕ್ಕದ್ದಲ್ಲ.**

9. ಪರವಾನಿಗೆ ಪಡೆದು ಪ್ರದರ್ಶಿಸುವ ಪ್ರತಿಯೊಂದು ಫಲಕದ ಕೆಳಭಾಗದಲ್ಲಿ (ಅಂದರೆ ಜಾಹೀರಾತಿನ ಕೆಳಭಾಗ) ಆರು ಇಂಚಿಗಿಂತ ಕಡಿಮೆ ಇಲ್ಲದ ಎತ್ತರ ಮತ್ತು ಫಲಕದಷ್ಟೇ ಅಗಲವಾಗಿರುವ ಬಿಳಿಯ ಹಿನ್ನೆಲೆ ಹೊಂದಿರುವ ಲೋಹದ ಪಟ್ಟಿಯಲ್ಲಿ ಕಪ್ಪುಬಣ್ಣದ ಅಕ್ಷರಗಳಿಂದ ಎಡಭಾಗದಲ್ಲಿ ಪಾಲಿಕೆ ನೀಡಿರುವ ಗಣಕೀಕೃತ ಕೋಡ್ ಸಂಖ್ಯೆಯನ್ನು ಮತ್ತು ಬಲಭಾಗದಲ್ಲಿ ಏಜೆನ್ಸಿಯ ಹೆಸರನ್ನು, ರಸ್ತೆಯ ಮಟ್ಟದಿಂದಲೇ ಗೋಚರಿಸುವ ರೀತಿಯಲ್ಲಿ ನಮೂದಿಸಿ ಅಳವಡಿಸಿರಬೇಕು.

10. ನ್ಯಾಯಾಲಯದ ನಿರ್ದಿಷ್ಟ ಆದೇಶಗಳ/ನಿರ್ದೇಶನಗಳನ್ವಯ ಮುಂದುವರೆಸುವ ಫಲಕಗಳಲ್ಲಿ ಏಜೆನ್ಸಿಯ ಹೆಸರು ಮತ್ತು ನ್ಯಾಯಾಲಯದ ಪ್ರಕರಣಗಳ ಸಂಖ್ಯೆ ಈ ವಿವರಗಳನ್ನು ಕಪ್ಪು ಬಣ್ಣದ ಅಕ್ಷರಗಳಿಂದ ಹಳದಿ ಬಣ್ಣದ ಹಿನ್ನೆಲೆಯಲ್ಲಿ ಪ್ರದರ್ಶಿಸಬೇಕು. ತಪ್ಪಿದಲ್ಲಿ ಇಂತಹ ಜಾಹೀರಾತುಗಳನ್ನು ಅನಧಿಕೃತವೆಂದು ಪರಿಗಣಿಸಲಾಗುವುದು.

11. ಬೆಂಗಳೂರು ನಗರದಲ್ಲಿ ಜಾಹೀರಾತು ಫಲಕಗಳ ಸ್ಥಳ ಮತ್ತು ಪ್ರದರ್ಶನವನ್ನು ನಿಯಂತ್ರಿಸುವ ಉದ್ದೇಶದಿಂದ, ಸದರಿ ಕ್ಷೇತ್ರವನ್ನು ಈ ನಿಯಮಾವಳಿಗಳಿಗೆ ಲಗತ್ತಿಸಿರುವ ಅನುಸೂಚಿಗಳಲ್ಲಿ ವಿವರಿಸಿರುವಂತೆ, ಎ, ಬಿ, ಸಿ ಮತ್ತು ಡಿ ವಲಯಗಳೆಂದು ವರ್ಗೀಕರಿಸಲಾಗಿರುತ್ತದೆ.
ಈ ವಲಯಗಳಲ್ಲಿ ಸೇರದೆ ಇರುವ ರಸ್ತೆಯನ್ನು ಅದರ ಸಮೀಪವಿರುವ ವಲಯಕ್ಕೆ ಸಂಬಂಧಿಸಿದಂತೆ ಪರಿಗಣಿಸಬೇಕು.
'ಎ' ವಲಯದಲ್ಲಿ ಯಾವುದೇ ಫಲಕದ ಪ್ರದರ್ಶನಕ್ಕೆ ಅನುಮತಿ ನೀಡತಕ್ಕದ್ದಲ್ಲ. 'ಬಿ', 'ಸಿ' ಮತ್ತು 'ಡಿ' ವಲಯಗಳಲ್ಲಿ ಈ ಅನುಚ್ಛೇದದ, 10ನೆಯ ಉಪ ಅನುಚ್ಛೇದಕ್ಕನುಗುಣವಾಗಿ ಫಲಕಗಳನ್ನು ರಸ್ತೆಯ ಎರಡೂ ಬದಿಗಳಲ್ಲಿ ಪ್ರದರ್ಶಿಸಲು ಅನುಮತಿ ನೀಡಬಹುದಾಗಿದೆ.

12. ಯಾವುದೇ ಜಾಹೀರಾತು ಫಲಕವು :
   i) ಯಾವುದೇ ಕಟ್ಟಡ ಅಥವಾ ಸ್ವತ್ತಿನ ಅಂಚುಗಳನ್ನು (ಗಡಿಯನ್ನು) ನಿಗಧಿಪಡಿಸಿದಲ್ಲಿ, ಆ ಅಂಚಿನಿಂದ ಹೊರಗೆ ಬೀದಿಗೆ **ಚಾಚತಕ್ಕದ್ದಲ್ಲ.**
   ii) ಸಾರ್ವಜನಿಕ ಉದ್ಯಾನವನ ಅಥವಾ ವಿಹಾರಧಾಮಗಳಿರುವ ರಸ್ತೆಗಳಲ್ಲಿ ಅಲ್ಲಿಂದ ಹತ್ತು (10) ಮೀಟರ್ ಅಂತರದಲ್ಲಿರಬಾರದು.
   iii) ವಾಸದ ಕಟ್ಟಡ ಅಥವಾ ವಾಣಿಜ್ಯ ಕಟ್ಟಡಗಳ ಕಿಟಕಿ ಅಥವಾ ಬಾಗಿಲುಗಳಿಗೆ ಅಡ್ಡವಿರತಕ್ಕದ್ದಲ್ಲ ಮತ್ತು ಅವುಗಳನ್ನು ಮರೆ ಮಾಡತಕ್ಕದ್ದಲ್ಲ.
   iv) ವಿದ್ಯುತ್ ಟ್ರಾನ್ಸ್‌ಫಾರ್ಮರ್ ಅಥವಾ ವಿದ್ಯುತ್ ವಾಹಕ ತಂತಿಗಳಿಂದ (live)3.5 ಮೀಟರ್‌ಗಳ ಅಂತರದಲ್ಲಿರತಕ್ಕದ್ದಲ್ಲ.

13. ಸಾಮಾನ್ಯ ನಿಯಮದಂತೆ ಆಯುಕ್ತರು ನಿರ್ದಿಷ್ಟ ಉದ್ದೇಶ/ ಅವಧಿಗೆ ಅನುಮತಿ ನೀಡಿರುವ ಸೂಚನೆಗಳ/ ಸಂಕೇತಗಳ ಫಲಕದ ಹೊರತಾಗಿ, ಇತರೇ ಜಾಹೀರಾತು ಫಲಕಗಳನ್ನು ಉದ್ಯಾನವನಗಳಲ್ಲಿ ಅಥವಾ ಉಪವನಗಳಲ್ಲಿ ಅಥವಾ ಅವುಗಳಿಗೆ ಹೊಂದಿಕೊಂಡಿರುವ ಜಾಗದಲ್ಲಿ ಫ್ಲೈ ಓವರ್‌ಗಳಲ್ಲಿ ಪ್ರದರ್ಶಿಸತಕ್ಕದ್ದಲ್ಲ.

14. 'ಬಿ', 'ಸಿ' ಮತ್ತು 'ಡಿ' ವಲಯಗಳಲ್ಲಿ ಈ ಕೆಳಕಂಡ ಷರತ್ತುಗಳನ್ನೊಳಗೊಂಡು ಫಲಕಗಳಿಗೆ ಅವಕಾಶ ನೀಡಲಾಗುವುದು.
   i) 'ಬಿ' ವಲಯದಲ್ಲಿ ಅಳವಡಿಸುವ ಜಾಹೀರಾತು ಫಲಕಗಳು ಅಳತೆ 24 X 12ಅಡಿಗಳಿಗೆ ಮೀರದಂತೆ ಮತ್ತು ಮೇಲ್ಛಾವಣಿಯ ಮೇಲೆ ಅಳವಡಿಸುವ ಜಾಹೀರಾತು ಫಲಕಗಳ ಅಳತೆ 30 X 15ಅಡಿಗಳಿಗೆ ಮೀರತಕ್ಕದ್ದಲ್ಲ. ಜಾಹೀರಾತು ಫಲಕಗಳ ಎತ್ತರ ನೆಲದಿಂದ 40 ಅಡಿಗಿಂತ ಹೆಚ್ಚಿಗೆ ಇರತಕ್ಕದ್ದಲ್ಲ. ಎರಡು ಜಾಹೀರಾತು ಫಲಕಗಳ ನಡುವೆ ಕನಿಷ್ಟ ಒಂದು ಮೀಟರಿನಷ್ಟು ಅಂತರವಿರಬೇಕು. ವಿದ್ಯುತ್ ಮತ್ತು ಎಲೆಕ್ಟ್ರಾನಿಕ್ ಫಲಕಗಳನ್ನು ಉಪಯೋಗಿಸುವುದರಿಂದ, ಫಲಕಗಳ ಸಂಖ್ಯೆ ಕಡಿಮೆಯಾಗಿ ಆ ಭೂಪ್ರದೇಶದ ಸೌಂದರ್ಯವೂ ಹೆಚ್ಚಾಗುವುದಾದಲ್ಲಿ ಈ ನಿಯಮದಲ್ಲಿ ವಿನಾಯಿತಿ ನೀಡುವುದರ ಕುರಿತು ಪರಿಶೀಲಿಸಬಹುದಾಗಿದೆ.
   ii) 'ಸಿ' ವಲಯದಲ್ಲಿ ಜಾಹೀರಾತು ಫಲಕದ ಅಳತೆ 40 x 20 ಅಡಿಗಳಿಗೆ ಮೀರತಕ್ಕದ್ದಲ್ಲ ಮತ್ತು ಎತ್ತರ ನೆಲದಿಂದ 50 ಅಡಿಮೀರತಕ್ಕದ್ದಲ್ಲ. ಎರಡು ಜಾಹೀರಾತು ಫಲಕಗಳ ನಡುವಿನ ಅಂತರ ಕನಿಷ್ಟ 1 ಮೀಟರ್ ನಷ್ಟಿರಬೇಕು.
   iii) 'ಡಿ' ವಲಯದಲ್ಲಿ ಅಳವಡಿಸುವ ಜಾಹೀರಾತು ಫಲಕಗಳ ಅಳತೆ 40 X 20ಅಡಿಗಳಿಗೆ ಮೀರಿರಬಾರದು ಮತ್ತು ಎತ್ತರ ವಿಷಯದಲ್ಲಿ ನಿಬಂಧನೆಗಳು ಅನ್ವಯಿಸುವುದಿಲ್ಲ ಹಾಗೂ ಎರಡು ಫಲಕಗಳ ನಡುವೆ ಕನಿಷ್ಟ ಒಂದು ಮೀಟರ್ ಅಂತರವಿರಬೇಕು. ಒಂದು ಜಾಹೀರಾತು ಫಲಕದ ಮೇಲೆ ಮತ್ತೊಂದು ಜಾಹೀರಾತು ಫಲಕವನ್ನು ಯಾವುದೇ ಕಟ್ಟಡದ ಮೇಲ್ಛಾವಣಿಯ ಮೇಲೆ ಅಳವಡಿಸಲು ಅನುಮತಿ ನೀಡತಕ್ಕದ್ದಲ್ಲ. ಆದಾಗ್ಯೂ ಇಂತಹ ಜಾಹೀರಾತು ಫಲಕವನ್ನು ನೆಲ ಅಂತಸ್ತಿನಲ್ಲಿ ಮಾತ್ರ ಅನುಮತಿಸಬಹುದಾಗಿದೆ.

iv) ನಿಯಾನ್ ಚಿಹ್ನೆಯುಳ್ಳ ಫಲಕಗಳನ್ನು ಅವುಗಳು ಎಷ್ಟು ದೂರದವರೆಗೆ ಗೋಚರಿಸಬೇಕು ಎನ್ನುವ ಆಧಾರದ ಮೇಲೆ ಉಪಬಂಧ (v)ರಲ್ಲಿ ತಿಳಿಸಿದಂತೆ, ಎತ್ತರದ ವಿಷಯದಲ್ಲಿ ವಿನಾಯಿತಿ ನೀಡಿ ಪ್ರದರ್ಶಿಸಲು ಪರವಾನಿಗೆ ನೀಡಲಾಗುವುದು.

v) ಜಾಹೀರಾತು ಫಲಕಗಳ ಎತ್ತರः ಬೇರೆ ಬೇರೆ ವಲಯಗಳಲ್ಲಿ ಜಾಹೀರಾತು ಫಲಕಗಳಿಗೆ ಅನುಮತಿಸುವ ಎತ್ತರದ ವಿವರಗಳನ್ನು ಈ ಮೇಲಿನ ಪರಿಚ್ಛೇದಗಳಲ್ಲಿ ನೀಡಲಾಗಿದೆ. ಇದರ ಸ್ಪಷ್ಟ ಚಿತ್ರಣ ಈ ಕೆಳಕಂಡಂತಿದೆ.

| (a) | ನೆಲ | ಮೇಲ್ಛಾವಣಿ (1ನೇ ಮಹಡಿ) |
|---|---|---|
| A ವಲಯ | | ಜಾಹೀರಾತು ಫಲಕಗಳು ಹಾಗೂ ನಿಯಾನ್ ಸೈನ್ ಒಳಗಂಡಂತೆ ಕಡ್ಡಾಯವಾಗಿ ಅನುಮತಿ ಇಲ್ಲ |
| B ವಲಯ | 40 ಅಡಿ | 40 ಅಡಿ (ನೆಲದಿಂದ) |
| C ವಲಯ | 50 ಅಡಿ | 50 ಅಡಿ (ನೆಲದಿಂದ) |
| D ವಲಯ | ಎತ್ತರದ ನಿರ್ಬಂಧವಿಲ್ಲ | ಎತ್ತರದ ನಿರ್ಬಂಧವಿಲ್ಲ |

(b) ಏಜೆನ್ಸಿಗಳು ತಾವು ಅಳವಡಿಸುವ ನಿಯಾನ್ ಸೈನ್‌ಗಳ ವಿನ್ಯಾಸದ ಧೃಡತೆಯ ಬಗ್ಗೆ ಅವಶ್ಯ ಪ್ರಮಾಣ ಪತ್ರಗಳನ್ನು ಆಯುಕ್ತರಿಗೆ ಸಲ್ಲಿಸಿದಲ್ಲಿ ಎತ್ತರದ ನಿರ್ಬಂಧವಿಲ್ಲದೆ 'ಎ' ವಲಯವನ್ನು ಹೊರತುಪಡಿಸಿ ಉಳಿದ ವಲಯಗಳಲ್ಲಿ ನೀಡಲು ಪರಿಗಣಿಸಲಾಗುವುದು.

(c) ಕಟ್ಟಡ ರ್‍ಯಾಪ್ಸ್ (Building Wraps) ಗಳಿಗೆ ಸಂಬಂಧಿಸಿದಂತೆ, ಗಾತ್ರ ಮತ್ತು ಎತ್ತರದ ನಿರ್ಬಂಧಗಳನ್ನು ಒಂದೊಂದು ಪ್ರಕರಣದಲ್ಲಿ ನಗರದ ಸೌಂದರ್ಯ ಮತ್ತು ಸಾರ್ವಜನಿಕ ಸುರಕ್ಷಗಳ ಆಧಾರದ ಮೇಲೆ ಪರಿಶೀಲಿಸಲಾಗುವುದು.

i) ಅನುಮೋದಿಸಿರುವ ಸ್ಥಳದಲ್ಲಿ ಅಳವಡಿಸುವ ಫಲಕ ಪಾದಚಾರಿಗಳ ಚಾಲನೆಗೆ ಅಡ್ಡಿಯಾಗದಂತೆ ಅದರ ಕೆಳಗಿರುವ ನೆಲದ ಮೇಲ್ಮೈ ಅಥವಾ ರಸ್ತೆಯಿಂದ ಕನಿಷ್ಟ 2.5 ಮೀ. ಎತ್ತರದಲ್ಲಿರಬೇಕು. ಸದರಿ ಫಲಕ ಅದೇ ನಿವೇಶನದಲ್ಲಿ ಈ ಮೊದಲೇ ಅನುಮತಿಸಿ ಅಳವಡಿಸಿರುವ ಫಲಕಗಳ ಸಾಲಿನಲ್ಲೇ ಇರತಕ್ಕದ್ದು.

ii) ಫಲಕಗಳ ಆಧಾರವನ್ನು ಸಾಕಷ್ಟು ದಪ್ಪವಿರುವ ಸ್ಟೀಲ್, ಇತರೇ ಲೋಹ ಅಥವಾ ಕಾಂಕ್ರೀಟಿನಿಂದ ತಯಾರಿಸಿದ್ದು, ಮೈದಾನದಲ್ಲಿ ಅಥವಾ ಮೇಲ್ಛಾವಣಿಯಲ್ಲಿ ಕಾಂಕ್ರೀಟಿನಿಂದ ಭದ್ರವಾಗಿ ಹೂಳಿರಬೇಕು ಮತ್ತು ಪಾಲಿಕೆಯು ಫಲಕಗಳ ಸಂಬಂಧ ನೀಡಿರುವ ವಿವರಗಳನ್ವಯ ಪೇಂಟು ಮಾಡಿರಬೇಕು. ಅನುಮೋದಿಸಿರುವ ಸ್ಥಳದಲ್ಲಿ ಫಲಕ ನಿರ್ಮಿಸುವ ಏಜೆನ್ಸಿಯು, ವಿನ್ಯಾಸದ ಧೃಡತೆಯ ಬಗ್ಗೆ ಅವಶ್ಯಕ ತಾಂತ್ರಿಕ ಪ್ರಮಾಣ ಪತ್ರ ಹಾಗೂ ಉದ್ಭವಿಸಬಹುದಾದ ಆಕಸ್ಮಿಕ ಅಪಘಾತಗಳ ಋಣಭಾರದ ಸಂಬಂಧ ಅಗತ್ಯ ವಿಮೆ ಹೊಂದಿರಬೇಕು.

iii) ಸೌರಶಕ್ತಿಯಂತಹ ರೂಢಿಯಲ್ಲಿಲ್ಲದ ಇಂಧನ ಮೂಲಗಳನ್ನು ಉತ್ತೇಜಿಸುವ ದೃಷ್ಟಿಯಿಂದ ಸೋಲಾರ್ ಇಂಧನದಿಂದ ಪ್ರಕಾಶಿಸುವಂತಹ ಫಲಕಗಳ ಅನುಮತಿಗೆ ಆದ್ಯತೆ ನೀಡತಕ್ಕದ್ದು.

iv) ರೈಲ್ವೆ ನಿಲ್ದಾಣದ ಆವರಣ ಅಥವಾ ಸಾರ್ವಜನಿಕ ಕಟ್ಟಡಗಳ ಸುತ್ತಲಿನ ರೇಲಿಂಗ್ಸ್‌ಗಳಿಗೆ ಅಳವಡಿಸಲು ಅನುಮೋದಿಸಿರುವ ಫಲಕಗಳು, ಆವರಣ ಅಥವಾ ರೇಲಿಂಗ್ಸ್‌ಗಳಲ್ಲಿ ಒಂದೇ ರೀತಿಯಲ್ಲಿ ಸಾಲಾಗಿ ಅಳವಡಿಸಬೇಕು.

v) ಪಾಲಿಕೆಯ ಪರವಾನಿಗೆ ಹೊಂದಿರುವ ಎಲ್ಲಾ ಫಲಕಗಳನ್ನು ಮತ್ತು ಅವುಗಳ ಆಧಾರಗಳನ್ನು ಅಚ್ಚುಕಟ್ಟಾಗಿ, ವ್ಯವಸ್ಥಿತವಾಗಿ ನಿರ್ವಹಿಸಬೇಕು.

vi) ಒಂದೇ ರೀತಿಯ ದಟ್ಟ ಹಸಿರು ಎನಾಮೆಲ್ ಬಣ್ಣ / ಪೇಂಟಿನಿಂದ ಕನಿಷ್ಠ ಎರಡು ಪದರವಾದರೂ ಪೇಂಟ್ / ಬಣ್ಣ ಮಾಡಬೇಕು. ಈ ನಿರ್ದೇಶನಗಳನ್ನು ಉಲ್ಲಂಘಿಸಿದಲ್ಲಿ ಆಯುಕ್ತರು ಸದರಿ ಏಜೆನ್ಸಿಗೆ ಪೂರ್ಣ ವಿನ್ಯಾಸವನ್ನು ಏಳು ದಿನಗಳೊಳಗಾಗಿ ಪೇಂಟು/ಬಣ್ಣ ಮಾಡಲು ನಿರ್ದೇಶಿಸಿ ನೋಟೀಸು ಜಾರಿ ಮಾಡಬೇಕು. ಒಂದು ವೇಳೆ ಏಜೆನ್ಸಿಯು ಈ ನಿರ್ದೇಶನಗಳನ್ನು ಪಾಲಿಸಲು ವಿಫಲರಾದಲ್ಲಿ ಆಯುಕ್ತರು ಪೂರ್ಣ ವಿನ್ಯಾಸವನ್ನು ಪೇಂಟ್/ಬಣ್ಣ ಮಾಡಿಸಿಕೊಂಡು ಅದರ ವೆಚ್ಚವನ್ನು, ಜೊತೆಗೆ ರೂ.2500/-ರಷ್ಟು ದಂಡವನ್ನು ಏಜೆನ್ಸಿಗೆ ವಿಧಿಸಬೇಕು.

vii) ಎಲ್ಲಾ ಪ್ರಕಾರದ ಫಲಕಗಳ ವಿನೈಲ್/ಫ್ಲೆಕ್ಸ್ ಮತ್ತು ಪೇಂಟ್ / ಬಣ್ಣ ಮಾಡಿದ ಭಾಗದ ಕೆಳಗೆ ಕಪ್ಪು ಬಣ್ಣದ ಲೋಹದ ಪಟ್ಟಿಯನ್ನು ಅಳವಡಿಸಿ, ಸದರಿ ಪಟ್ಟಿಯ ಎಡಭಾಗದಲ್ಲಿ ಪರವಾನಿಗೆ ಸಂಖ್ಯೆಯನ್ನು ಮತ್ತು ಬಲಭಾಗದಲ್ಲಿ ಏಜೆನ್ಸಿಯ ಹೆಸರನ್ನು ರಸ್ತೆಯ ಬದಿಯಿಂದ ಎಲ್ಲಾ ಸಮಯದಲ್ಲೂ ಸುಲಭವಾಗಿ ಓದಬಹುದಾದ ರೀತಿಯಲ್ಲಿ ನಮೂದಿಸಬೇಕು.

viii) ರಾಷ್ಟ್ರದ ಹಿತದೃಷ್ಟಿ ಅಥವಾ ಭಾವನೆಗಳಿಗೆ ಮಾರಕವಾಗಿರುವ ಅಥವಾ ಅಶ್ಲೀಲ, ಅಥವಾ ಅಸಭ್ಯಕರವಾದ ಹಾಗೂ ಸಾರ್ವಜನಿಕ ನೈತಿಕತೆಯ ಮೇಲೆ ಪರಿಣಾಮ ಬೀರುವಂತಹ ಜಾಹೀರಾತುಗಳನ್ನು ಪ್ರದರ್ಶಿಸತಕ್ಕದ್ದಲ್ಲ. ಆದಾಗ್ಯೂ ಒಂದು ವೇಳೆ ಪ್ರದರ್ಶಿಸಿರುವ ಯಾವುದೇ ಜಾಹೀರಾತು ಮೇಲಿನ ನಿಬಂಧನೆಗಳಿಗನುಗುಣವಾಗಿಲ್ಲವೆಂದು ಆಯುಕ್ತರು ಅಭಿಪ್ರಾಯ ಪಟ್ಟಲ್ಲಿ ಮೂರು ದಿನಗಳ ನೋಟೀಸು ನೀಡಿ, ಸದರಿ ಜಾಹೀರಾತನ್ನು ತೆಗೆದುಹಾಕಬೇಕು. ಇಲ್ಲದಿದ್ದಲ್ಲಿ ವಿರೂಪಗೊಳಿಸಬೇಕು.

ix) ಯಾವುದೇ ವ್ಯಕ್ತಿಯು ಆಯುಕ್ತರು ದಾಖಲಿಸಿರುವ ಯಾವುದೇ ಚಿಹ್ನೆ, ಅಥವಾ ಗುರುತು ಅಥವಾ ಅಕ್ಷರ ಅಥವಾ ಶಬ್ದಗಳನ್ನು ಅಥವಾ ಆಯುಕ್ತರಿಂದ ಪರವಾನಿಗೆ ಪಡೆದು ನಿಗದಿತ ತೆರಿಗೆ ಪಾವತಿ ಮಾಡಿ ಅಳವಡಿಸಿರುವ, ದಾಖಲಿಸಿರುವ, ಅಥವಾ ಪ್ರದರ್ಶಿಸಿರುವ ಜಾಹೀರಾತುಗಳನ್ನು ವಿರೂಪಗೊಳಿಸತಕ್ಕದ್ದಲ್ಲ ಅಥವಾ ವಿರೂಪಗೊಳಿಸಲು ಕಾರಣರಾಗತಕ್ಕದ್ದಲ್ಲ.

x) ಆಯುಕ್ತರು ಅವರು ಹೊಂದಿರುವ ಅಧಿಕಾರವನ್ನು ಚಲಾಯಿಸಿ ಯಾವುದೇ ಜಾಹೀರಾತು ಫಲಕಕ್ಕೆ ಅನುಮತಿ ನೀಡಬಹುದಾಗಿದೆ ಅಥವಾ ನಿರಾಕರಿಸಬಹುದಾಗಿದೆ. ಸಾಮಾನ್ಯವಾಗಿ ಇಂತಹ ಅನುಮತಿ ಅಥವಾ ಅನುಮೋದನೆ ನೀಡುವಾಗ ಸುರಕ್ಷೆ ಮತ್ತು ಶಾಂತಿಯನ್ನೊಳಗೊಂಡು ಸದರಿ ಬೈಲಾದಲ್ಲಿರುವ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು.

xi) ಪರವಾನಿಗೆ ನಿರಾಕರಿಸಿರುವ ಪ್ರಕರಣಗಳಲ್ಲಿ ಕಾರಣಗಳನ್ನು ಅರ್ಜಿದಾರರಿಗೆ ಲಿಖಿತ ಆದೇಶದ ಮೂಲಕ ಪರವಾನಿಗೆ ಕೋರಿ ನಗರಪಾಲಿಕೆಗೆ ಅರ್ಜಿ ಸಲ್ಲಿಸಿದ ನಲವತ್ತೈದು (45) ದಿನಗಳೊಳಗಾಗಿ ತಿಳಿಸತಕ್ಕದ್ದು.

xii) ಆಯುಕ್ತರು ಲಿಖಿತ ಆದೇಶದ ಮೂಲಕ, ಜಾಹೀರಾತಿಗೆ ಸಂಬಂಧಿಸಿರುವ ಸ್ವತ್ತಿನ ಮಾಲೀಕರು ಅಥವಾ ಅಲ್ಲಿ ವಾಸಿಸುತ್ತಿರುವ ವ್ಯಕ್ತಿಗಳು, ವರ್ತಕ ಮಂಡಳಿ ಅಥವಾ ಸಂಸ್ಥೆಗಳು ಅಥವಾ ಸದರಿ ಜಾಹೀರಾತನ್ನು ತೆಗೆದುಹಾಕಲು ಅಧಿಕಾರವುಳ್ಳವರಿಗೆ ಯಾವುದೇ ಕಟ್ಟಡ ಅಥವಾ ಗೋಡೆ ಅಥವಾ ಫಲಕ ಅಥವಾ ವಿನ್ಯಾಸದ ಮೇಲೆ ಅಳವಡಿಸಿರುವ, ದಾಖಲಿಸಿರುವ ಅಥವಾ ನಾಟಿರುವ ಅಥವಾ ಸ್ಥಿರಪಡಿಸಿರುವ ಅಥವಾ ಸಾರ್ವಜನಿಕ ರಸ್ತೆ ಅಥವಾ ಸ್ಥಳದಿಂದ ಗೋಚರಿಸುತ್ತಿರುವ ಜಾಹೀರಾತನ್ನು ತೆಗೆದುಹಾಕುವಂತೆ ತಿಳಿಸಬಹುದಾಗಿದೆ.

xiii) ಬೈಲಾ (vii)ರ ಅವಕಾಶದಡಿಯಲ್ಲಿ ಆಯುಕ್ತರು ನೀಡಿರುವ ಆದೇಶದಿಂದ ನೊಂದಿರುವ, ಆಸಕ್ತ ವ್ಯಕ್ತಿ ಅಥವಾ ಏಜೆನ್ಸಿಯು ಆದೇಶ ತಲುಪಿದ ಹದಿನೈದು (15) ದಿನಗಳೊಳಗಾಗಿ ಲಿಖಿತ ರೂಪದಲ್ಲಿ ಪುನರ್ ಪರಿಶೀಲನಾ ಅರ್ಜಯನ್ನು ನಿಗಧಿತ ನಮೂನೆಯಲ್ಲಿ ಸಲ್ಲಿಸತಕ್ಕದ್ದು. ಪುನರ್ ಪರಿಶೀಲನಾ ಅರ್ಜಿ ನೀಡಿದ ಹತ್ತು (10) ಕಾರ್ಯ ನಿರ್ವಹಣಾ ದಿನಗಳೊಳಗಾಗಿ ಸದರಿ ಅರ್ಜಿಗೆ ಆಯುಕ್ತರು ಲಿಖಿತ ರೂಪದಲ್ಲಿ ಉತ್ತರಿಸತಕ್ಕದ್ದು.

xiv) ಒಂದು ವೇಳೆ 10 ದಿನಗಳೊಳಗಾಗಿ ಆಯುಕ್ತರು ಪುನರ್ ಪರಿಶೀಲನಾ ಅರ್ಜಿಗೆ ಸಂಬಂಧಿಸಿದಂತೆ ಆದೇಶ ನೀಡದಿದ್ದಲ್ಲಿ, ಅರ್ಜಿಯನ್ನು ನಿಗಧಿತ ನಮೂನೆಯಲ್ಲಿ ಪಾಲಿಕೆಯ ಅಪೀಲು ಸ್ಥಾಯಿ ಸಮಿತಿಗೆ ಸಲ್ಲಿಸತಕ್ಕದ್ದು.

xv) ಯಾವುದೇ ಆಸಕ್ತ ವ್ಯಕ್ತಿ ಅಥವಾ ಏಜೆನ್ಸಿಯು, ಆಯುಕ್ತರು ಅರ್ಜಿಯನ್ನು ತಿರಸ್ಕರಿಸಿ ನೀಡಿದ ಆದೇಶದ ವಿರುದ್ಧ, ಸದರಿ ಆದೇಶ ತಲುಪಿದ ಹದಿನೈದು ದಿನಗಳೊಳಗಾಗಿ ಅಪೀಲು ಸ್ಥಾಯಿ ಸಮಿತಿಗೆ ನಿಗಧಿತ ನಮೂನೆಯಲ್ಲಿ ಅರ್ಜಿ ಸಲ್ಲಿಸಬಹುದಾಗಿದೆ.

ಆದರೆ ಇಂತಹ ಅಫೀಲುಗಳನ್ನು ಸಲ್ಲಿಸುವಾಗ, ಆದೇಶಗಳನ್ನು ಪಾಲಿಸದ ಪ್ರಕರಣಗಳಲ್ಲಿ ಆಯುಕ್ತರು ತೆಗೆದುಕೊಳ್ಳುವ ಕ್ರಮಕ್ಕೆ ಧಕ್ಕೆಯುಂಟಾಗದಂತೆ ಅಂದರೆ ಜಾಹೀರಾತು ಅಥವಾ ಪೋಸ್ಟರ್‌ಗಳನ್ನು ತೆಗೆದುಹಾಕಲು ನೀಡಿರುವ ಅವಧಿ ಯಾವ ಕಾರಣಕ್ಕೂ ಮುಂದುವರೆಯದಂತೆ ಕಾಳಜಿ ವಹಿಸಬೇಕು.

15. ಅಪೀಲು ಸ್ಥಾಯಿ ಸಮಿತಿ ಆದೇಶ ನೀಡುವ ಪೂರ್ವದಲ್ಲಿ ವಾಡೂ ಕಡೆಯ ಅಹವಾಲು ಕೇಳಬೇಕು ಮತ್ತು ದಾಖಲೆಗಳು ಹಾಗೂ ನಿರ್ದಿಷ್ಟ ಸ್ಥಳವನ್ನು ತಪಾಸಣೆ ಮಾಡಬಹುದು. ತದನಂತರ ಕಾನೂನಿನ್ವಯ ಆದೇಶವನ್ನು ನೀಡಬಹುದಾಗಿದೆ.

ಅಪೀಲು ಪುರಸ್ಕೃತವಾದಲ್ಲಿ ಆದೇಶದಲ್ಲಿರುವ ನಿಬಂಧನೆಗಳಿಗನುಸಾರವಾಗಿ ಜಾಹೀರಾತು ಫಲಕವನ್ನು ಅಳವಡಿಸಲು ಏಜೆನ್ಸಿಗೆ ಅನುಮತಿ ನೀಡತಕ್ಕದ್ದು.

ಒಂದು ವೇಳೆ ಅಪೀಲು ತಿರಸ್ಕೃತವಾದಲ್ಲಿ, ಏಜೆನ್ಸಿಯು ಮುಂದಿನ ಅಪೀಲನ್ನು ಸಲ್ಲಿಸಲು ಇಚ್ಛಿಸಿದ್ದಾಗ್ಯೂ ಅಥವಾ ಸಲ್ಲಿಸಿದ್ದರೂ ಜಾಹೀರಾತು ಫಲಕವನ್ನು 10 ದಿನಗಳೊಳಗಾಗಿ ತೆಗೆದುಹಾಕತಕ್ಕದ್ದು.

ಈ ರೀತಿಯ ಲಿಖಿತ ಆದೇಶಗಳನ್ನು ನಿಗಧಿತ ಅವಧಿಯಲ್ಲಿ ಪಾಲಿಸದಿದ್ದ ಪಕ್ಷದಲ್ಲಿ ಆಯುಕ್ತರು ಸದರಿ ಫಲಕವನ್ನು ತೆಗೆದುಹಾಕಿಸಲು ಕ್ರಮ ತೆಗೆದುಕೊಳ್ಳತಕ್ಕದ್ದು ಮತ್ತು ಇದಕ್ಕೆ ತಗಲುವ ವೆಚ್ಚವನ್ನು ಸಂಬಂಧಪಟ್ಟ ಮಾಲೀಕರಿಂದ ಅಥವಾ ಮೇಲೆ ತಿಳಿಸಿದಂತೆ ಸ್ವಾಧೀನತೆ ಹೊಂದಿದವರಿಂದ ವಸೂಲು ಮಾಡುವುದರ ಜೊತೆಗೆ ಕಾನೂನು ಕ್ರಮಕ್ಕೆ ಒಳಪಡಿಸುವುದು ಇತ್ಯಾದಿ ಇತರೇ ದಂಡನಾ ಕ್ರಮಗಳನ್ನು ತೆಗೆದುಕೊಳ್ಳಬೇಕು.

16. ಈ ಬೈಲಾಗಳನ್ನು ಉಲ್ಲಂಘಿಸಿದಂತಹ ಪ್ರಕರಣಗಳಲ್ಲಿ ಪಾಲಿಕೆಯು ಕಾರಣ ಕೇಳಿ ನೋಟೀಸು ಜಾರಿ ಮಾಡತಕ್ಕದ್ದು, ಏಳು ಕಾರ್ಯನಿರ್ವಹಣಾ ದಿನಗಳೊಳಗಾಗಿ ಉತ್ತರ ನೀಡದೆ ಅಥವಾ ಉಲ್ಲಂಘನೆ ದೃಢಪಟ್ಟಂತಹ ಪ್ರಕರಣಗಳು ಕೆಳಕಂಡ ದಂಡನೆಗಳಿಗೆ ಅರ್ಹವಾಗುತ್ತದೆ.

i) ರೂ.5,000/-ದವರೆಗೆ ದಂಡ ಮತ್ತು ಉಲ್ಲಂಘನೆ ಮುಂದುವರಿದಲ್ಲಿ ನೋಟೀಸು ನೀಡಿದ ದಿನದಿಂದ ಅನ್ವಯವಾಗುವಂತೆ, ಉಲ್ಲಂಘನಾ ಅವಧಿಯಲ್ಲಿ ಪ್ರತಿದಿನ ರೂ.500/-ರವರೆಗೆ ದಂಡ

ii) ಉಲ್ಲಂಘನೆ ಮುಂದುವರೆಯದಂತೆ ಆಯುಕ್ತರು ನೀಡಿರುವ ನೋಟೀಸು ತಲುಪಿದ ದಿನದಿಂದ ಜಾರಿಗೆ ಬರುವಂತೆ ಉಲ್ಲಂಘನೆ ಮುಂದುವರೆದ ಅವಧಿಗೆ ಪ್ರತಿದಿನ ರೂ.750/-ರವರೆಗೆ ದಂಡ.

iii) ಮೂರು ದಿನಗಳ ನೋಟೀಸು ನೀಡಿ ಆಯುಕ್ತರು ಅನಧಿಕೃತ ಜಾಹೀರಾತುಗಳನ್ನು ವಿರೂಪಗೊಳಿಸಬಹುದಾಗಿದೆ.

iv) ಇಂತಹ ತಪ್ಪುಗಳ ಪುನರಾವರ್ತನೆಗಾಗಿ ಆಯುಕ್ತರು ಅವರ ವಿವೇಚನೆಗೊಳಪಟ್ಟಂತೆ ಸದರಿ ಏಜೆನ್ಸಿಗೆ ವಿವರಣೆ ನೀಡಲು ಅವಕಾಶ ನೀಡಿ, ಲಿಖಿತವಾಗಿ ದಾಖಲಿಸಿದ ಕಾರಣಗಳಿಗಾಗಿ ಏಜೆನ್ಸಿಯ ನೊಂದಣಿಯನ್ನು ನವೀಕರಣ ಮಾಡದಿರಬಹುದಾಗಿದೆ. ಈ ಕ್ರಮವನ್ನು ಮತ್ತು ಅದಕ್ಕೆ ಕಾರಣಗಳನ್ನು ಏಜೆನ್ಸಿಗೆ ತಿಳಿಸತಕ್ಕದ್ದು.

17. ಟ್ರೈವಿಶನ್/ಟ್ರೈಆಡ್ ಅಥವಾ ಎಲೆಕ್ಟ್ರಾನಿಕ್ ಪ್ರದರ್ಶಿಸಿದ ಫಲಕಗಳು ರಸ್ತೆಯ ಮೇಲ್ಸೇತುವೆ, ರಸ್ತೆಯ ಕೆಳಸೇತುವೆ ಅಥವಾ ಫ್ಲೆ ಓವರ್‌ಗಳ ಗೋಡೆ ಅಥವಾ ಪೆರಾಪಿಟ್‌ಗಳಿಂದ 10 ಮೀಟರ್ ಅಂತರದಲ್ಲಿರತಕ್ಕದ್ದಲ್ಲ. ಈ ದೂರವನ್ನು ಲೆಕ್ಕಹಾಕುವಾಗಿ ಜಾಹೀರಾತು ಫಲಕದ ಅತಿ ಸಮೀಪದ ಬಿಂದು ಅಥವಾ ವಿನ್ಯಾಸದ ಸಮೀಪದ ರಸ್ತೆಯಲ್ಲಿರುವ ಪಾರ್ಶ್ವ/ಬದಿಗಳನ್ನು ಪರಿಗಣಿಸಬೇಕು.

18. ಪಾಲಿಕೆಯು ಹೊಸ ಫಲಕಗಳಿಗೆ ಅಥವಾ ಈಗಾಗಲೇ ಇರುವ ಫಲಕಗಳನ್ನು ಮುಂದುವರೆಸಲು ಪರವಾನಿಗೆ ನೀಡುವಾಗ ಫಲಕದ ನಿರ್ದಿಷ್ಟ ಸ್ಥಳ, ಅದರ ಅಳತೆ, ತೆರಿಗೆಯ ಪ್ರಮಾಣ ಮತ್ತು ಅನ್ವಯವಾಗುವ ತೆರಿಗೆಯ ವಿವರ ನೀಡಿ, ತೆರಿಗೆ ನೀಡಲು ಸಂಬಂಧಿಸಿದ ಏಜೆನ್ಸಿಗೆ ಬೇಡಿಕೆ ನೋಟೀಸು (demand notice) ಜಾರಿ ಮಾಡಬೇಕು.

19. ಜಾಹೀರಾತು ಏಜೆನ್ಸಿಯು ಜಾಹೀರಾತು ತೆರಿಗೆಯ ಹಿಂಬಾಕಿಯನ್ನು ಪಾವತಿಸದಿದ್ದಲ್ಲಿ ಹಿಂಬಾಕಿಯನ್ನು ತೀರಿಸುವವರೆಗೆ ಹೊಸ ಫಲಕ ಅಥವಾ ಫಲಕದ ನವೀಕರಣದ ಪರವಾನಿಗೆಯನ್ನು ಪಾಲಿಕೆಯು ತಡೆಹಿಡಿಯುವುದು.

20. ಟ್ರೈಆಡ್, ಸ್ಕ್ರೋಲರುಗಳು ಮುಂತಾದ ಬಹುವಿಧದ ಜಾಹೀರಾತುಗಳಿಗೆ ಷೆಡ್ಯೂಲ್ ದರಗಳಲ್ಲಿ ವಿಧಿಸುವ ಮತ್ತು ಕಾಲಕಾಲಕ್ಕೆ ಪರಿಷ್ಕರಿಸಬಹುದಾದ ಜಾಹೀರಾತು ತೆರಿಗೆ ದರದ 100% ಹೆಚ್ಚಿನ ಪ್ರಮಾಣದಲ್ಲಿ ಜಾಹೀರಾತು ತೆರಿಗೆಯನ್ನು ವಿಧಿಸಲಾಗುವುದು.

21. ಚಾಲ್ತಿಯಲ್ಲಿರುವ ಯಾವುದೇ ಫಲಕವನ್ನು ಇನ್ನೊಂದು ಬಗೆಯಲ್ಲಿ (ಉದಾಃ ಪ್ರಕಾಶಿತವಲ್ಲದ ಫಲಕಗಳನ್ನು ಪ್ರಕಾಶಿತಗೊಳಿಸುವುದು, ಪ್ರಕಾಶಿತವಿರುವುದನ್ನು ಟ್ರೈವಿಜನ್/ಸ್ಕ್ರೋಲರ್/ನಿಯಾನ್ ರೀತಿಯಲ್ಲಿ ರೂಪಾಂತರ ಗೊಳಿಸುವುದು ಇತ್ಯಾದಿ) ಮಾರ್ಪಾಡುಗೊಳಿಸಲು ಆಯುಕ್ತರ ಲಿಖಿತ ಪೂರ್ವಾನುಮತಿ ಪಡೆಯುವ ಮತ್ತು ನಿಗಧಿಗೊಳಿಸುವ ಶುಲ್ಕ ಮತ್ತು ತೆರಿಗೆ ಪಾವತಿ ಮಾಡುವ ಅವಶ್ಯಕತೆಯಿದೆ. ಈ ಬೈಲಾವನ್ನು ಉಲ್ಲಂಘಿಸಿದ ಪ್ರಕರಣಗಳಲ್ಲಿ ಮೊದಲು ಉಲ್ಲಂಘನೆಗೆ ಪ್ರತಿ ದಿನ ರೂ.1,000/- ಮತ್ತು ಎರಡನೆಯ ಸಲದ ಉಲ್ಲಂಘನೆಗೆ ಪ್ರತಿದಿನ ರೂ.2,500/-ರಷ್ಟು ದಂಡ ವಿಧಿಸುವುದರ ಜೊತೆಗೆ ಆಯುಕ್ತರ ವಿವೇಚನೆಗೆ ಒಳಪಟ್ಟಂತೆ ನೊಂದಣಿಯನ್ನು ರದ್ದುಗೊಳಿಸಲಾಗುವುದು. ತೆರಿಗೆಯನ್ನು ಬೈಲಾ-12ರಲ್ಲಿ ತಿಳಿಸಿರುವಂತೆ ಪರವಾನಿಗೆ ನೀಡಿದ ದಿನಾಂಕದಿಂದ ವಿಧಿಸಲಾಗುವುದು.

22. ಏಜೆನ್ಸಿಗಳು ಎಲ್ಲಾ ಜಾಹೀರಾತುಗಳ ತೆರಿಗೆಗಳನ್ನು ಪ್ರತಿ ವರ್ಷ ಜುಲೈ 30ರೊಳಗಾಗಿ ಸಲ್ಲಿಸಬೇಕು. ಜಾಹೀರಾತು ತೆರಿಗೆಯನ್ನು ವರ್ಷದ ಎರಡು ಕಂತುಗಳಲ್ಲಿ ಅಂದರೆ ಮೊದಲನೆಯ ಕಂತು ಜುಲೈ 1 ರಿಂದ ಡಿಸೆಂಬರ್ 31ರವರೆವಿಗೂ ಹಾಗೂ ಎರಡನೆಯ ಕಂತು ಜನವರಿ 1ರಿಂದ ಜೂನ್ 30ರೊಳಗಾಗಿ ಪಾವತಿಮಾಡಬಹುದಾಗಿದೆ.

23. ನವೀಕರಣಕ್ಕಾಗಿ ಮನವಿಯನ್ನು ನಿಗಧಿತ ನಮೂನೆಯಲ್ಲಿ ಚಾಲ್ತಿಯಲ್ಲಿರುವ ನವೀಕರಣ ಮುಕ್ತಾಯವಾಗುವ ವರ್ಷದ ಮೇ 30ರೊಳಗಾಗಿ ಪಾಲಿಕೆಗೆ ಸಲ್ಲಿಸಬೇಕು ಮತ್ತು ಪಾಲಿಕೆಯು ಈ ಕೆಳಕಂಡ ಷರತ್ತುಗಳನ್ನೊಳಗೊಂಡು ನವೀಕರಣ ಸಮ್ಮತಿಸಬಹುದಾಗಿದೆ.
   i) ಚಾಲ್ತಿಯಲ್ಲಿರುವ ಪರವಾನಿಗೆಯಲ್ಲಿದ್ದ ಫಲಕದ ವಿನ್ಯಾಸದಲ್ಲಿ ಬದಲಾವಣೆ ಇರಬಾರದು.
   ii) ಎಲ್ಲಾ ಜಾಹೀರಾತುಗಳಿಗೆ ಆ ದಿನಾಂಕದವರೆಗಿನ ತೆರಿಗೆಯನ್ನು ಪಾವತಿ ಮಾಡಿರಬೇಕು.
   iii) ಫಲಕ ಅಳವಡಿಸಿರುವ ವಿನ್ಯಾಸದ ಹಾಗೂ ಫಲಕವನ್ನು ಯಾವುದೇ ಕಟ್ಟಡ ಮೇಲ್ಛಾವಣಿಯಲ್ಲಿ ಅಳವಡಿಸಿದಲ್ಲಿ ಕಟ್ಟಡದ ದೃಢತೆ ಬಗ್ಗೆ ಪ್ರಮಾಣಪತ್ರ ಚಾಲ್ತಿಯಲ್ಲಿರಬೇಕು.
   iv) ಭೂಮಾಲೀಕರು ನೀಡಿರುವ ನಿರಾಕ್ಷೇಪಣಾ ಪ್ರಮಾಣಪತ್ರ ಚಾಲ್ತಿಯಲ್ಲಿರಬೇಕು.
   v) ನವೀಕರಣದ ಪುನರ್ ಪರಿಶೀಲನೆಯು ಬೈಲಾಗಳ ಉಲ್ಲಂಘನೆಗೆ ಕಾರಣವಾಗಿರಬಾರದು.

24. ಜಾಹೀರಾತುದಾರರಿಗೆ ಒಂದು ನಿರ್ದಿಷ್ಟ ಸ್ಥಳದಲ್ಲಿ ಜಾಹೀರಾತು ಪ್ರದರ್ಶಿಸಲು ಅನುಮತಿ ನೀಡಿರುವಾಗ ಅದನ್ನು ಸ್ಥಳಾಂತರಗೊಳಿಸಲು ಅಥವಾ ಅನುಮತಿಯನ್ನು ಬೇರೆ ಏಜೆನ್ಸಿಗೆ ವರ್ಗಾಯಿಸಲು ಅವಕಾಶವಿರುವುದಿಲ್ಲ. ಉದ್ದೇಶ ಯಾವುದೇ ಇದ್ದರೂ, ಫಲಕಗಳನ್ನು ಇತರೇ ಏಜೆನ್ಸಿಗೆ ಒಳಗೇಣಿಗೆಯಾಗಿ ಕೊಡುವುದಕ್ಕೆ ಅನುಮತಿ ನೀಡತಕ್ಕದಲ್ಲ. ಆದಾಗ್ಯೂ ವಿನೈಲ್, ಫ್ಲೆಕ್ಸ್ ಮುಂತಾದ ಜಾಹೀರಾತುಗಳನ್ನು ಅಳವಡಿಸಲು ಸೃಜನಾತ್ಮಕ ಏಜೆನ್ಸಿಯ ಸೇವೆಯನ್ನು ಉಪಯೋಗಿಸಿಕೊಳ್ಳಬಹುದಾಗಿದೆ.

25. ಪಾಲಿಕೆಯು ನೂತನ ಪರವಾನಿಗೆ ನೀಡುವ ಸಂದರ್ಭದಲ್ಲಿ ಈಗಾಗಲೇ ಚಾಲ್ತಿಯಲ್ಲಿರುವ ಫಲಕವು ಗೋಚರಿಸಬೇಕಾಗಿರುವ ಅಂಚುಗಳು, ಹೊಸದಾಗಿ ಅಳವಡಿಸಲು ಪ್ರಸ್ತಾಪಿಸಿರುವ ಫಲಕದಿಂದಾಗಿ ಮರೆಯಾಗದಂತೆ ಖಚಿತಪಡಿಸಿಕೊಳ್ಳತಕ್ಕದ್ದು.
ಒಂದು ವೇಳೆ ಪರವಾನಿಗೆ ನೀಡಲಾಗಿರುವ ಹೊಸ ಫಲಕ, ಈಗಾಗಲೇ ಇರುವ ಫಲಕವನ್ನು ಮರೆ ಮಾಡುತ್ತಿದ್ದಲ್ಲಿ ಅಂತಹ ಅರ್ಜಿದಾರರಿಗೆ ಪಾಲಿಕೆಯು, ಇದಕ್ಕೆ 3 ದಿನಗಳೊಳಗಾಗಿ ಕಾರಣ ತಿಳಿಸುವಂತೆ ಅರ್ಜಿದಾರರಿಗೆ ಕೇಳಬಹುದು ಮತ್ತು ನೀಡಲಾಗಿರುವ ಉತ್ತರ ತೃಪ್ತಿಕರವಿಲ್ಲವೆಂದು ಕಂಡುಬಂದಲ್ಲಿ ಹೊಸ ಫಲಕವನ್ನು ತೆಗೆದುಹಾಕಲು ಕ್ರಮ ತೆಗೆದುಕೊಳ್ಳಬಹುದಾಗಿದೆ.

26. ಸಾರ್ವಜನಿಕ ಪ್ರಾಧಿಕಾರಗಳು, ಸರ್ಕಾರಿ ಅಥವಾ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ, ಏರ್ಪೋರ್ಟ್ ಅಥಾರಿಟಿ ಆಫ್ ಇಂಡಿಯಾ, ರೈಲ್ವೆ , ರಕ್ಷಣಾ ಮಂತ್ರಾಲಯ, ಸಾರ್ವಜನಿಕ ಉದ್ದಿಮೆಗಳು ಮುಂತಾದ ಅರೆ ಸರ್ಕಾರಿ ಸಂಸ್ಥೆಗಳು ಇವುಗಳಿಗೆ ಸಂಬಂಧಿಸಿರುವ ಸ್ವತ್ತು ಅಥವಾ ಆವರಣಗಳಲ್ಲಿ ಫಲಕಗಳನ್ನು ಅಳವಡಿಸಲು ಹಾಗೂ ಪ್ರದರ್ಶಿಸಲು ಇಚ್ಛಿಸುವ ಏಜೆನ್ಸಿಗಳು, ತೆರಿಗೆ ವಿಧಿಸಲು ಅನುಕೂಲವಾಗುವಂತೆ, ಅಳವಡಿಸಲು ಇಚ್ಛಿಸುವ ಫಲಕದ ಸ್ಥಳ, ಗಾತ್ರ ಮತ್ತು ಅಳವಡಿಸುವ ದಿನಾಂಕದ ಕುರಿತು ಅಳವಡಿಸಲು ಪ್ರಸ್ತಾಪಿಸಿರುವ ದಿನಾಂಕದಿಂದ ಪೂರ್ವದಲ್ಲಿ 15 ದಿನಗಳಿಗೆ ಮೀರದಂತೆ ಪಾಲಿಕೆಗೆ ತಿಳಿಸತಕ್ಕದ್ದು, ಇಂತಹ ಫಲಕಗಳ ಸ್ಥಳ, ಗಾತ್ರ, ಎತ್ತರ ಮತ್ತು ಈ ಬೈಲಾಗಳ ಇತರೇ ಷರತ್ತುಗಳು ಸದರಿ ಫಲಕಗಳಿಗೆ ಅನ್ವಯವಾಗುತ್ತದೆ. ಮತ್ತು ಇದರಲ್ಲಿ ಯಾವುದೇ ವಿನಾಯಿತಿ ನೀಡತಕ್ಕದಲ್ಲ ಮತ್ತು ಇದನ್ನು ಪಾಲಿಸುವುದು ಅಥವಾ ಜಾರಿ ಮಾಡುವುದು ಫಲಕ ಅಳವಡಿಕೆಗೆ ಪರವಾನಿಗೆ ನೀಡುವ ಸಂಸ್ಥೆಯ ಹೊಣೆಯಾಗಿರುತ್ತದೆ.

27. ಎಲ್ಲಾ ಸರ್ಕಾರಿ ಮತ್ತು ಅರೆ ಸರ್ಕಾರಿ ಸಂಸ್ಥೆಗಳು ಅವರುಗಳ ಆವರಣದಲ್ಲಿ ಅಳವಡಿಸಿರುವ ಫಲಕಗಳೊಂದಿಗೆ ಅವುಗಳ ಏಜೆನ್ಸಿಗಳು, ಫಲಕಗಳ ಸ್ಥಳ, ಗಾತ್ರ ಮತ್ತು ಅವುಗಳ ಸಂಖ್ಯೆಗಳನ್ನೊಳಗೊಂಡ ಪಟ್ಟಿಯನ್ನು ಪ್ರತಿ ವರ್ಷ ಒಂದು ಸಲ ಪಾಲಿಕೆಗೆ ಸಲ್ಲಿಸತಕ್ಕದ್ದು.
ಅದರಂತೆಯೇ ಖಾಸಗಿ ಸ್ವತ್ತುಗಳಲ್ಲಿ ಫಲಕಗಳನ್ನು ಅಳವಡಿಸುವ ಕುರಿತು ಏಜೆನ್ಸಿಯು ಈ ಬೈಲಾಗಳಲ್ಲಿ ನಿಗಧಿಪಡಿಸಿದ ರೀತಿಯಲ್ಲಿ ಸ್ವತಃ ಅರ್ಜಿ ಸಲ್ಲಿಸಿ, ಲಿಖಿತ ಪರವಾನಿಗೆಯನ್ನು ಪಡೆದುಕೊಳ್ಳಬೇಕು. ಖಾಸಗಿ ಸ್ವತ್ತುಗಳಲ್ಲಿ ಮತ್ತು ಸರ್ಕಾರಿ ಮತ್ತು ಅರೆಸರ್ಕಾರಿ ಸ್ವತ್ತುಗಳಲ್ಲಿ ಅಳವಡಿಸುವ ಫಲಕಗಳಿಗೆ ನೀಡುವ ಪರವಾನಿಗೆಗಳಲ್ಲಿ ತಾರತಮ್ಯ ಮಾಡತಕ್ಕದ್ದಲ್ಲ.
ಈ ಉಪ ಪರಿಚ್ಛೇದದ ಉಲ್ಲಂಘನೆಯಾದಲ್ಲಿ ಜಾಹೀರಾತುದಾರರು ಮತ್ತು ಫಲಕ ಹೊಂದಿರುವ ಸ್ವತ್ತಿನ ಮಾಲೀಕತ್ವ ಹೊಂದಿರುವ ಏಜೆನ್ಸಿ ಇವರುಗಳನ್ನು ವಜಾ ಮಾಡಲಾಗುವುದು.

28. ಪಾಲಿಕೆಯು, ಜಾಹೀರಾತು ತೆರಿಗೆ ಪಾವತಿ ಮಾಡದೇ ಇರುವ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಹೆಚ್.ಎ.ಎಲ್, ರೈಲ್ವೆ ಇತ್ಯಾದಿ ಇವುಗಳ ಸ್ವತ್ತಿನಲ್ಲಿ ಅಳವಡಿಸಿರುವ ಜಾಹೀರಾತನ್ನು ತೆಗೆದುಹಾಕುವ ಹಕ್ಕು/ಅಧಿಕಾರ ಹೊಂದಿರುತ್ತದೆ.

29. ಅನುಬಂಧ-2ರಲ್ಲಿ ತಿಳಿಸಿರುವಂತೆ ಫಲಕಗಳಿಗೆ ಅನುಮತಿ ನೀಡಲಾಗುವುದು. ಸಮಕ್ಷೇತ್ರವಿರುವ ಆದರೆ ಲಂಬಾಕಾರ ಅಥವಾ ಚೌಕಾಕಾರದಲ್ಲಿರುವ ಫಲಕಗಳನ್ನು ಆಯುಕ್ತರು ಅವುಗಳು ಈ ಬೈಲಾಗಳಲ್ಲಿಯ ಪರವಾನಿಗೆಗಾಗಿ ನಿಗಧಿಪಡಿಸಿರುವ ಷರತ್ತುಗಳನ್ನು ಅತಿಕ್ರಮಿಸುವುದಿಲ್ಲವೆಂದು ಮನವರಿಕೆಯಾದಲ್ಲಿ ಪ್ರತ್ಯೇಕ ಪ್ರಕರಣಗಳನ್ನು ಪರಿಶೀಲಿಸಿ ಅನುಮತಿ ನೀಡಬಹುದಾಗಿದೆ.

30. ಯಾವುದೇ ಗಾತ್ರದ ನಮೂನೆಯ ಅಥವಾ ಬೆಂಗಳೂರು ನಗರದ ಯಾವುದೇ ಸ್ಥಳದಲ್ಲಿ, ಯಾವುದೇ ಜಾಹೀರಾತುದಾರರು ಚಾಲ್ತಿಯಲ್ಲಿರುವ ಫಲಕದ ಮೇಲೆ ಲಂಬಾಕಾರದಲ್ಲಿ ಮತ್ತೊಂದು (ಡಬಲ್ ಡೆಕ್ಕರ್) ಅಥವಾ ಹೆಚ್ಚಿನ ಸಂಖ್ಯೆಯಲ್ಲಿ (ತ್ರಿಬಲ್ ಡೆಕ್ಕರ್) ಫಲಕಗಳನ್ನು ಆಯುಕ್ತರ

ಪೂರ್ವಾನುಮತಿ ಇಲ್ಲದೆಯೇ ಅಳವಡಿಸತಕ್ಕದ್ದಲ್ಲ. ಒಂದು ವೇಳೆ ಇಂತಹ ಫಲಕಗಳನ್ನು ಕಟ್ಟಡದ ಒಂದು ಗೋಡೆಯ ಮೇಲ್ಮೈ ಮೇಲೆ ಅವುಗಳ ಯಾವುದೇ ಭಾಗ ಕಟ್ಟಡದ ಅಂಚುಗಳ ಹೊರಗೆ ಆಕಾಶದತ್ತ ಚಾಚದಿದ್ದಲ್ಲಿ ಈ ಬೈಲಾಗಳ ಪರಿಚ್ಛೇದ 14 a (v) ರಲ್ಲಿರುವ ಎತ್ತರದ ಸಂಬಂಧದ ಅವಕಾಶಗಳಿಗೆ ವಿನಾಯಿತಿ ನೀಡಲಾಗುವುದು.

ಆದಾಗ್ಯೂ ಒಂದರ ಮೇಲೊಂದು ಇರುವಂತೆ ಗೋಚರವಾಗುವ ಎರಡು ಫಲಕಗಳಿಗೆ ಎರಡು ಫಲಕಗಳ ನಡುವಿನ ಅಂತರ ಕನಿಷ್ಟ ಒಂದು ಮೀಟರ್ ಇರತಕ್ಕದ್ದು ಎನ್ನುವ ನಿಬಂಧನೆ ಅನ್ವಯಿಸುತ್ತದೆ.

(i) ಫಲಕ ಅಳವಡಿಸಿದ ನಂತರ ಅಳವಡಿಕೆ ಪೂರ್ಣಗೊಂಡ 24 ಘಂಟೆಗಳೊಳಗಾಗಿ ಏಜೆನ್ಸಿಯು ಪಾಲಿಕೆಯ ಜಾಹೀರಾತು ಶಾಖೆಗೆ ಮಾಹಿತಿ ನೀಡಬೇಕು.

(ii) ತದನಂತರ, ಜಾಹೀರಾತು ಇಲಾಖೆಯು ಮೂರು ದಿನಗಳೊಳಗಾಗಿ ಫಲಕದ ಸ್ಥಳದ ಸಮೀಕ್ಷೆ ನಡೆಸಿ, ಅರ್ಜಿಯು ಬೈಲಾಗಳಿಗನುಗುಣವಾಗಿರುವ ಬಗ್ಗೆ , ಪರವಾನಿಗೆ ಷರತ್ತುಗಳು ಮತ್ತು ಏಜೆನ್ಸಿಯು ಸಲ್ಲಿಸಿರುವ ಅಥವಾ ಅನುಮತಿ ನೀಡಿರುವ ರೀತಿಯಲ್ಲಿ ಮಾರ್ಪಡಿಸಿರುವ ರೂಪರೇಖೆಗಳನ್ನು ಪರಿಶೀಲಿಸಿದ, ನಂತರ ಸಂಬಂಧಿಸಿದ ಏಜೆನ್ಸಿಗೆ ಜಾಹೀರಾತು ಪ್ರದರ್ಶಿಸಲು ಪರವಾನಿಗೆ ನೀಡಿರುವ ಬಗ್ಗೆ ತಿಳಿಸಬೇಕು.

(iii) ಜಾಹೀರಾತು ಶಾಖೆಯಿಂದ ಅನುಮತಿ ಪಡೆಯದ ಹೊರತು ಯಾವುದೇ ಏಜೆನ್ಸಿಯು ಯಾವುದೇ ಜಾಹೀರಾತನ್ನು ಜಾಹೀರಾತು ಫಲಕದ ಮೇಲೆ ಪ್ರದರ್ಶಿಸತಕ್ಕದ್ದಲ್ಲ.

(iv) ಈ ಬೈಲಾಗಳನ್ನು ಪಾಲಿಸಲು ವಿಫಲವಾದ ಏಜೆನ್ಸಿಯು ಉಲ್ಲಂಘನಾ ಅವಧಿಯಲ್ಲಿ ಪ್ರತಿದಿನ ರೂ.5,000/-ರಂತೆ ದಂಡ ನೀಡಬೇಕಾಗುತ್ತದೆ. ಅಥವಾ ಹೊರಾಂಗಣ ಜಾಹೀರಾತು ಏಜೆನ್ಸಿಯ ನೋಂದಣಿ ರದ್ದುಗೊಳಿಸಲು ಕಾರಣವಾಗುತ್ತದೆ.

B. ಸ್ವಜಾಹೀರಾತುಗಳ ಅಳವಡಿಕೆ ಮತ್ತು ಪ್ರದರ್ಶನದ ಕುರಿತು ಪ್ರಮಾಣಗಳುಃ

(i) ತಮ್ಮದೇ ಆದ ಉತ್ಪನ್ನ ಮತ್ತು ಸೇವೆಯ ಕುರಿತು,ಟ್ರಾನ್ಸ್‌ಲೈಟ್‌ಗಳನ್ನೊಳಗೊಂಡು ಸಂಕೇತ ಫಲಕಗಳನ್ನು ಪ್ರದರ್ಶಿಸಲಿಚ್ಛಿಸುವ ವಾಣಿಜ್ಯ ಸಂಸ್ಥೆಗಳು, ಬಹುರಾಷ್ಟ್ರೀಯ ಕಂಪನಿಗಳು, ಕಾರ್ಖಾನೆಯವರುಗಳು, ವ್ಯಾಪಾರಸ್ಥರುಗಳು, ವಾಸ್ತುಶಿಲ್ಪಿಗಳು, ಅಭಿವೃದ್ಧಿ ಪಡಿಸುವವರು (Developers) ಆಸ್ಪತ್ರೆಗಳು, ರಾಜ್ಯ ಸರ್ಕಾರದ ಅಂಗಸಂಸ್ಥೆಗಳು, ಕೇಂದ್ರ ಸರ್ಕಾರದ ಅಂಗ ಸಂಸ್ಥೆಗಳು, ವಾಣಿಜ್ಯ ಜಾಹೀರಾತುಗಳಿಗೆ ನಿಗದಿಪಡಿಸಿರುವ ರೀತಿಯಲ್ಲಿಯೇ, ಆಯುಕ್ತರಿಂದ ಲಿಖಿತ ಪರವಾನಿಗೆ ಪಡೆಯಬೇಕಾಗುತ್ತದೆ. ಆದರೆ ಇವುಗಳು ವಾಣಿಜ್ಯ ಜಾಹೀರಾತುದಾರರೆಂದು (ಏಜೆನ್ಸಿಗಳು) ಪಾಲಿಕೆಯಲ್ಲಿ ನೊಂದಣಿ ಹೊಂದುವ ಅವಶ್ಯಕತೆಯಿರುವುದಿಲ್ಲ. ಇಂತಹ ಪರವಾನಿಗೆ ಸದರಿ ಸಂಸ್ಥೆ, ಕಛೇರಿ/ಅಂಗಸಂಸ್ಥೆಗಳ ಜಾಹೀರಾತುಗಳಿಗೆ ಮಾತ್ರ ಸೀಮಿತವಾಗಿರುತ್ತದೆ ಮತ್ತು ಇಂತಹ ಜಾಹೀರಾತುಗಳನ್ನು ಯಾವುದೇ ಕಾರಣಕ್ಕೂ ವಾಣಿಜ್ಯ ಜಾಹೀರಾತುಗಳಾಗಿ ಬದಲಾವಣೆ ಮಾಡತಕ್ಕದ್ದಲ್ಲ.

(ii) ಒಂದು ವೇಳೆ ಇಂತಹ ಸಂಸ್ಥೆಗಳು ಇತರೇ ತಯಾರಿಕೆದಾರರುಗಳ ಉತ್ಪನ್ನಗಳು ಅಥವಾ ಸೇವೆಯ ಕುರಿತು ಜಾಹೀರಾತುಗಳನ್ನು ಪ್ರದರ್ಶಿಸಲು ಇಚ್ಛಿಪಟ್ಟಲ್ಲಿ, ಅವುಗಳು ವಾಣಿಜ್ಯ ಜಾಹೀರಾತುದಾರರೆಂದು ಪಾಲಿಕೆಯಲ್ಲಿ ನೊಂದಾಯಿಸಿಕೊಳ್ಳಬೇಕಾಗುತ್ತದೆ. ತಪ್ಪಿದಲ್ಲಿ ಇತರೇ ತಯಾರಿಕೆದಾರರುಗಳ ಉತ್ಪನ್ನ ಮತ್ತು ಸೇವೆಯ ಕುರಿತು ಜಾಹೀರಾತು ಪ್ರದರ್ಶಿಸುವ ಹಕ್ಕನ್ನು ಕಳೆದುಕೊಳ್ಳುತ್ತದೆ. ಸ್ವಜಾಹೀರಾತನ್ನು ವಾಣಿಜ್ಯ ಫಲಕವಾಗಿ ಬದಲಾವಣೆ ಮಾಡುವುದು ಆಯುಕ್ತರ ವಿವೇಚನೆಗೆ ಮಾತ್ರ ಒಳಪಟ್ಟಿದ್ದು, ಆಯುಕ್ತರು ಇಂತಹ ಅರ್ಜಿಯನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ, ಅವರ ಅರ್ಹತೆಗನುಸಾರ ಪರಿಶೀಲಿಸತಕ್ಕದ್ದು.

(iii) ಈ ಬೈಲಾದಲ್ಲಿಯ ಸದರಿ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಸಂಬಂಧಿಸಿದ ಸಂಸ್ಥೆ ಈ ಕೆಳಗಿನಂತೆ ದಂಡವನ್ನು ಭರಿಸಬೇಕಾಗುತ್ತದೆ.

ಮೊದಲನೆಯ ಉಲ್ಲಂಘನೆ - ರೂ. 3,000/- ದಂಡ

ಎರಡನೆಯ ಉಲ್ಲಂಘನೆಗೆ - ರೂ. 5,000/- ದಂಡ

ಮೂರನೆಯ ಉಲ್ಲಂಘನೆಗೆ - ರೂ. 10,000/- ದಂಡ ಮತ್ತು ಉದ್ದಿಮೆಯ ಅನುಮತಿಪಟ್ಟಿ ಅಥವಾ ಪಾಲಿಕೆ ನೀಡಿರುವ ಇತರೇ ಅನುಮತಿ ಪತ್ರ ರದ್ದುಗೊಳಿಸಬಹುದಾಗಿರುತ್ತದೆ.

C. ಕಿಟಕಿ (Window) ಜಾಹೀರಾತುಗಳ ಪ್ರಮಾಣಗಳುಃ

(i) ಕಿಟಿಕಿ ಜಾಹೀರಾತುಗಳು ಯಾವುದೇ ನಮೂನೆಯಲ್ಲಿದ್ದರೂ ಇವುಗಳನ್ನು ಸ್ವವಾಣಿಜ್ಯ ಜಾಹೀರಾತುಗಳ ರೀತಿಯಲ್ಲಿಯೇ ಪರಿಗಣಿಸಲಾಗುತ್ತದೆ. ಅಂಗಡಿಯ ಆವರಣದಲ್ಲಿಯೇ ಕಟ್‌ಔಟ್‌ಗಳ ಮೂಲಕ ಪ್ರದರ್ಶಿಸುವ ಕ್ಯಾಮರಾಗಳು, ಫಿಲ್ಮಗಳು ಇವುಗಳ ಜಾಹೀರಾತುಗಳು ಇದರಲ್ಲಿ ಸೇರುತ್ತವೆ. ಮಾಮೂಲು ಜಾಹೀರಾತುಗಳು ಅಂದರೆ ಕಿಟಕಿಯಲ್ಲಿ ಇಡುವ ಅಥವಾ ಕಿಟಕಿ ಗನ್ನಡಿಗಳ ಮೇಲೆ ಅಂಟಿಸುವ ಸ್ಟಿಕ್ಕರುಗಳು (stickers) ಅಥವಾ ಸಣ್ಣ ಚಿತ್ರಗಳು ಇದರಲ್ಲಿ ಸೇರುವುದಿಲ್ಲ.

ಅಂಗಡಿಯ ಆವರಣದಲ್ಲಿಯೇ ಇಡಲಾದ ಕಟ್‌ಔಟ್‌ಗಳು (cutouts) ತೆರಿಗೆಯಿಂದ ವಿನಾಯಿತಿ ಹೊಂದಿರುತ್ತದೆ.

ಆದರೆ ಯಾವುದೇ ಕಟ್‌ಔಟ್‌ಗಳನ್ನು (cutout) ಅಂಗಡಿಯ ಹೊರಗಾಗಲೀ ಅಥವಾ ನಡೆದಾಡಲು ಇರುವ ಪಾರ್ಶ್ವದಾರಿಯಲ್ಲಾಗಲೀ ಅನುಮತಿಸತಕ್ಕದ್ದಲ್ಲ.

(ii) ಕಿಟಕಿ ಫಲಕಗಳಿಗೂ ಸ್ವ-ಫಲಕಗಳಿಗೆ ಅನ್ವಯಿಸುವ ಜಾಹೀರಾತು ದರ ಅನ್ವಯಿಸುತ್ತದೆ.

D. ಪೆಟ್ರೋಲ್ ಬಂಕ್‌ಗಳ ಮೇಲಿನ ಜಾಹೀರಾತುಗಳ ಪ್ರಮಾಣಗಳುಃ

(i) ಪಾಲಿಕೆಯ ಅಧಿಕಾರ ವ್ಯಾಪ್ತಿಯಲ್ಲಿ ಸೇರುವ ಪೆಟ್ರೋಲ್ ಬಂಕ್‌ಗಳಲ್ಲಿ ಅವರುಗಳ ಹೊರಾಂಗಣದಲ್ಲಿ ಲಭ್ಯವಾಗುವ ಉತ್ಪನ್ನಗಳ ಕುರಿತು ಪ್ರದರ್ಶಿಸುವ ಜಾಹೀರಾತು ಫಲಕಗಳನ್ನು ಸ್ವಜಾಹೀರಾತುಗಳೆಂದೇ ಪರಿಗಣಿಸಲಾಗುತ್ತದೆ.

(ii) ಒಂದು ವೇಳೆ ಪೆಟ್ರೋಲ್ ಬಂಕ್‌ಗಳಲ್ಲೇ ನೇರವಾಗಿ ಅವುಗಳಿಗೆ ಸಂಬಂಧಿಸದೇ ಇರುವ ಅಥವಾ ಅವುಗಳ ಮುಖ್ಯ ಮಾಲೀಕರು (ಉದಾಃ ಹಿಂದೂಸ್ಥಾನ ಪೆಟ್ರೋಲಿಯಂ) ಒದಗಿಸದೇ ಇರುವ ಇತರ ಉತ್ಪನ್ನ ಅಥವಾ ಸೇವೆಯ ಕುರಿತು ಜಾಹೀರಾತುಗಳನ್ನು

ಪ್ರದರ್ಶಿಸಿದಲ್ಲಿ ಇಂತಹ ಜಾಹೀರಾತುಗಳನ್ನು ವಾಣಿಜ್ಯ ಜಾಹೀರಾತುಗಳೆಂದು ಪರಿಗಣಿಸಲಾಗುವುದು. ಇಂತಹ ಯಾವುದೇ ಜಾಹೀರಾತನ್ನು ಮುಖ್ಯ ಮಾಲೀಕರು ಪಾಲಿಕೆಯಲ್ಲಿ ನಿಗಧಿತ ವಿಧದಲ್ಲಿ ಜಾಹೀರಾತು ಏಜೆನ್ಸಿಯೆಂದು ನೊಂದಣಿ ಹೊಂದಿದಲ್ಲಿ ಮಾತ್ರ ಅನುಮತಿಸಲಾಗುವುದು.

(iii) ಈ ಬೈಲಾಗಳಲ್ಲಿ ನಿರ್ದಿಷ್ಟ ಪಡಿಸಿರುವ ಷರತ್ತುಗಳನ್ನು ಉಲ್ಲಂಘಿಸಿದಂತಹ ವ್ಯಾಪಾರದ ಮಳಿಗೆಯು ಈ ಕೆಳಕಂಡಂತೆ ದಂಡಗಳನ್ನು ಭರಿಸಬೇಕಾಗುತ್ತದೆ.

| | | |
|---|---|---|
| ಮೊದಲನೆ ಸಲದ ಉಲ್ಲಂಘನೆ | - | ರೂ. 5,000/- ದಂಡ |
| ಎರಡನೆ ಸಲದ ಉಲ್ಲಂಘನೆಗೆ | - | ರೂ. 7,500/- ದಂಡ |
| ಮೂರನೆ ಸಲದ ಉಲ್ಲಂಘನೆಗೆ | - | ರೂ. 10,000/- ದಂಡ ಮತ್ತು ವಾಣಿಜ್ಯ ಅನುಮತಿ ಅಥವಾ ಜಾಹೀರಾತು ಪರವಾನಿಗೆಯನ್ನೊಳಗೊಂಡು ಇತರೆ ಯಾವುದೇ ಪಾಲಿಕೆ ನೀಡಿರುವ ಪರವಾನಿಗೆಯನ್ನು ರದ್ದುಪಡಿಸಬಹುದಾಗಿರುತ್ತದೆ. |

E. ಹೊರಾಂಗಣ ಚಲನಚಿತ್ರ ಜಾಹೀರಾತುಗಳು ಮತ್ತು ಸಿನಿಮಾ ಗೃಹಗಳಲ್ಲಿ ಪ್ರದರ್ಶಿಸುವ ಸ್ಲೈಡುಗಳ ಕುರಿತಾದ ಪ್ರಮಾಣಗಳುಃ

(i) ಹೊರಾಂಗಣ ಚಲನಚಿತ್ರ ಜಾಹೀರಾತುಗಳು ಮತ್ತು ಚಲನಚಿತ್ರದ ಸ್ಲೈಡುಗಳನ್ನು ಸಹ ವಾಣಿಜ್ಯ ಜಾಹೀರಾತುಗಳ ರೀತಿಯಲ್ಲಿಯೇ ವಾಣಿಜ್ಯ ಜಾಹೀರಾತು ಎಂದು ಪರಿಗಣಿಸಬೇಕಾಗುತ್ತದೆ.

(ii) ಸಿನಿಮಾ ಗೃಹಗಳ ಮಾಲೀಕರು ಸಹ ಪಾಲಿಕೆಯಲ್ಲಿ ವಾಣಿಜ್ಯ ಜಾಹೀರಾತುದಾರರೆಂದು ನೊಂದಣಿ ಹೊಂದಬೇಕಾಗಿರುತ್ತದೆ.

(iii) ಚಲನಚಿತ್ರಗಳ ಜಾಹೀರಾತುಗಳು ಮತ್ತು ಸ್ಲೈಡುಗಳ ಪ್ರದರ್ಶನ ಮತ್ತು ಉತ್ಪನ್ನ ವ್ಯಾಪಾರಸ್ಥರುಗಳು ಮತ್ತು ಅಂಗಡಿ/ಮಳಿಗೆದಾರರ ಮಾಹಿತಿಯುಳ್ಳ ಜಾಹೀರಾತುಗಳನ್ನು ಪ್ರದರ್ಶಿಸುವ ಮೊದಲು ಸಿನಿಮಾ ಗೃಹದ ಮಾಲೀಕರು ಆಯುಕ್ತರಿಂದ ಲಿಖಿತ ಪರವಾನಿಗೆ ಪಡೆಯತಕ್ಕದ್ದು.

(iv) ಈ ಬೈಲಾಗಳಲ್ಲಿ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಸಂಬಂಧಪಟ್ಟ ಮಳಿಗೆಯು ಈ ಕೆಳಕಂಡಂತೆ ದಂಡವನ್ನು ಭರಿಸಬೇಕಾಗುತ್ತದೆ.

| | | |
|---|---|---|
| ಮೊದಲನೆ ಸಲದ ಉಲ್ಲಂಘನೆ | - | ರೂ. 5,000/- ದಂಡ |
| ಎರಡನೆ ಸಲದ ಉಲ್ಲಂಘನೆಗೆ | - | ರೂ. 7,500/- ದಂಡ |
| ಮೂರನೆ ಸಲದ ಉಲ್ಲಂಘನೆಗೆ | - | ರೂ. 10,000/- ದಂಡ ಮತ್ತು ಯಾವುದೇ ವಾಣಿಜ್ಯ ಪರವಾನಿಗೆ ಮತ್ತು ಜಾಹೀರಾತು ಪರವಾನಿಗೆಯನ್ನೊಳಗೊಂಡು ಪಾಲಿಕೆ ನೀಡಿರುವ ಇತರೇ ಪರವಾನಿಗೆಗಳನ್ನು ರದ್ದುಗೊಳಿಸುವಿಕೆ. |

(v) ಜಾಹೀರಾತು ಪರವಾನಿಗೆಯನ್ನು ಎರಡು ಸಲ ರದ್ದುಗೊಳಿಸಿರುವ ಪ್ರಕರಣದಲ್ಲಿ ಸದರಿ ಏಜೆನ್ಸಿಯು ಮುಂದಿನ ನೋಂದಣಿಗೆ ಅನರ್ಹವೆಂದು ಪರಿಗಣಿಸಬೇಕಾಗಿರುತ್ತದೆ.

F. ಕೇಬಲ್ ದೂರದರ್ಶನದ ಜಾಹೀರಾತುಗಳಿಗೆ ಪ್ರಮಾಣಗಳುಃ

(i) ಪಾಲಿಕೆಯ ಅಧಿಕಾರ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಕೇಬಲ್ ದೂರದರ್ಶನ ನಿರ್ವಾಹಕರುಗಳು (Cable TV Operators) ವಾಣಿಜ್ಯ ಜಾಹೀರಾತುದಾರರುಗಳ ರೀತಿಯಲ್ಲಿಯೇ ವಾಣಿಜ್ಯ ಜಾಹೀರಾತುದಾರರೆಂದು ಪಾಲಿಕೆಯಲ್ಲಿ ನೊಂದಾಯಿಸಿಕೊಳ್ಳಬೇಕಾಗುತ್ತದೆ.

(ii) ವಾಣಿಜ್ಯದಾರರುಗಳ, ಅಂಗಡಿದಾರರುಗಳ, ವಾಣಿಜ್ಯ ಸಂಸ್ಥೆಗಳ, ಜಾಹೀರಾತುಗಳನ್ನು ಪ್ರದರ್ಶಿಸುವ ಮೊದಲು ಕೇಬಲ್ ದೂರದರ್ಶನ ನಿರ್ವಾಹಕರು ಆ ರೀತಿ ಪ್ರದರ್ಶಿಸಲು ಪಾಲಿಕೆಯಿಂದ ಲಿಖಿತ ಪೂರ್ವಾನುಮತಿ ಪಡೆಯತಕ್ಕದ್ದು.

(iii) ಈ ಬೈಲಾಗಳ ಷರತ್ತುಗಳನ್ನು ಉಲ್ಲಂಘನೆಯನ್ವಯ ಪ್ರಕರಣಗಳಲ್ಲಿ ಸಂಬಂಧಪಟ್ಟ ಮಳಿಗೆ ಈ ಕೆಳಕಂಡಂತೆ ದಂಡವನ್ನು ಭರಿಸಬೇಕಾಗುತ್ತದೆ.

| | | |
|---|---|---|
| ಮೊದಲನೆ ಸಲದ ಉಲ್ಲಂಘನೆ | - | ರೂ. 5,000/- ದಂಡ |
| ಎರಡನೆ ಸಲದ ಉಲ್ಲಂಘನೆಗೆ | - | ರೂ. 7,500/- ದಂಡ |
| ಮೂರನೆ ಸಲದ ಉಲ್ಲಂಘನೆಗೆ | - | ರೂ. 10,000/- ದಂಡ ಮತ್ತು ಯಾವುದೇ ವಾಣಿಜ್ಯ ಪರವಾನಿಗೆ ಅಥವಾ ಜಾಹೀರಾತುಗಳ ಪರವಾನಿಗೆಯನ್ನೊಳಗೊಂಡು ಪಾಲಿಕೆಯಿಂದ ನೀಡಲಾಗಿರುವ ಇತರೇ ಪರವಾನಿಗೆ ರದ್ದುಗೊಳಿಸುವಿಕೆ. |

(iv) ಎರಡುಸಲ ಜಾಹೀರಾತು ಪರವಾನಿಗೆ ರದ್ದಾದಂತಹ ಪ್ರಕರಣಗಳಲ್ಲಿ ಸಂಬಂಧಪಟ್ಟ ಏಜೆನ್ಸಿಯು ಮುಂದಿನ ನೊಂದಣಿಗೆ ಅನರ್ಹವಾಗುತ್ತದೆ.

G. ಕುದುರೆ ರೇಸಿನ ಜಾಹೀರಾತುಗಳ ಪ್ರಮಾಣ ಃ

(i) ಬೆಂಗಳೂರು ಟರ್ಫ ಕ್ಲಬ್ (BTC) ಇದನ್ನು ಸರ್ಕಾರಿ ಏಜೆನ್ಸಿಯೆಂದು ಪರಿಗಣಿಸಬೇಕು ಮತ್ತು ಇದು ವಾಣಿಜ್ಯ ಜಾಹೀರಾತುದಾರರಿಂದ ನೊಂದಣಿ ಮಾಡಿಕೊಳ್ಳುವ ಅವಶ್ಯಕತೆ ಇರುವುದಿಲ್ಲ.

(ii) ಆದಾಗ್ಯೂ ಬೆಂಗಳೂರು ಟರ್ಫ ಕ್ಲಬ್(BTC)ಯು ತನ್ನ ಮೊದಲನೇ ಸಾಲಿನ ವ್ಯಾಪಾರದ ಲೆಕ್ಕಪತ್ರದ ವಿವರಗಳನ್ನು, ಲೆಕ್ಕಪತ್ರ ತನಿಖಾ ವರದಿಯೊಂದಿಗೆ ಪ್ರತಿ ವರ್ಷದ ಜುಲೈ 31ರೊಳಗಾಗಿ ಸಲ್ಲಿಸತಕ್ಕದ್ದು. ಅಲ್ಲದೆ ಶೇಕಡ 75ರಷ್ಟು, ಕುದುರೆ ರೇಸಿನ ಮುಂಗಡ ತೆರಿಗೆಯೊಂದಿಗೆ ಆರ್ಥಿಕ ವಿವರಗಳನ್ನು ಸಹ ಪ್ರತಿ ವರ್ಷದ ಜುಲೈ 31ರೊಳಗಾಗಿ ಸಲ್ಲಿಸಬೇಕಾಗಿರುತ್ತದೆ. ತಪ್ಪಿದಲ್ಲಿ ಇದನ್ನು ಬೈಲಾಗಳ ಉಲ್ಲಂಘನೆ ಎಂದು ಪರಿಗಣಿಸಲಾಗುವುದು.

H. ಮೊಬೈಲ್ ಪ್ರದರ್ಶನಗಳ ಜಾಹೀರಾತುಗಳ ಪ್ರಮಾಣಗಳು:

(i) ಮೊಬೈಲ್ ಪ್ರದರ್ಶನಗಳಿಗೆಂದೇ ನಿರ್ದಿಷ್ಟ ಪಡಿಸಿರುವ ಮತ್ತು ಪಾಲಿಕೆಯ ಜಾಹೀರಾತು ಇಲಾಖೆಯಲ್ಲಿ ಲಭ್ಯವಿರುವ ಅರ್ಜಿ ನಮೂನೆಯಲ್ಲಿ ಅರ್ಜಿ ಸಲ್ಲಿಸಿ ಆಯುಕ್ತರಿಂದ ಲಿಖಿತ ಪರವಾನಿಗೆ ಪಡೆಯದ ಹೊರತು ಯಾವುದೆ ಜಾಹೀರಾತನ್ನು ಪ್ರದರ್ಶಿಸತಕ್ಕದ್ದಲ್ಲ.

(ii) ಜಾಹೀರಾತು ಹೊಂದಿರುವ ಯಾವುದೇ ವಾಹನವು, ಆಯುಕ್ತರು ಅನುಮೋದಿಸಿರುವ ನಮೂನೆ, ವಿಧಾನ ಹೊರತುಪಡಿಸಿ ಇತರೇ ರೀತಿಯಲ್ಲಿ ಜಾಹೀರಾತುಗಳನ್ನು ಪ್ರದರ್ಶಿಸತಕ್ಕದ್ದಲ್ಲ.

(iii) ಈ ರೀತಿಯಲ್ಲಿ ಸಾಗಿಸುತ್ತಿರುವ ಜಾಹೀರಾತು ಫಲಕಗಳು ವಾಹನದ ಉದ್ದ ಅಥವಾ ಅಗಲಕ್ಕಿಂತ ಮುಂದಕ್ಕೆ ಚಾಚುವುದಾಗಲಿ ಹಾಗೂ ಅವುಗಳು ವಾಹನದ ನೋಂದಣಿ ಗುರುತುಗಳು ಅಥವಾ ಅವಶ್ಯಕ ದೀಪಗಳು ಗೋಚರಿಸಿದಂತಾಗಲಿ ಅಥವಾ ವಾಹನ ಚಾಲನೆ ಮಾಡುತ್ತಿರುವವರಿಗೆ ಅಥವಾ ಇತರೇ ವಾಹನದ ಚಾಲಕರಿಗೆ ತಡೆಯನ್ನುಂಟು ಮಾಡುವಂತಾಗಲೀ ಅಳವಡಿಸತಕ್ಕದ್ದಲ್ಲ.

(iv) ಮೇಲ್ಸೇತುವೆ ರಸ್ತೆ, ಕೆಳ ಸೇತುವೆ ರಸ್ತೆಗಳು ಅಥವಾ ಪ್ಲೆ ಓವರ್‌ಗಳು ಅಥವಾ ಸಂಚಾರ ಸಂಧಿಗಳು, ಇವುಗಳಿಂದ 10 ಮೀ ಅಂತರದವರೆಗೆ ಯಾವುದೇ ಮೊಬೈಲ್ ಪ್ರದರ್ಶನಕ್ಕೆ ಅನುಮತಿ ನೀಡತಕ್ಕದ್ದಲ್ಲ.

(v) ಇತರೇ ಮೊಬೈಲ್ ಮಾಧ್ಯಮ ಅಂದರೆ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯ ವಾಹನಗಳು ಅಥವಾ ಸರ್ಕಾರ ಅಥವಾ ಅರೆ ಸರ್ಕಾರಿ ಸಂಸ್ಥೆಗಳಿಗೆ ಸೇರಿರುವ ವಾಹನಗಳು ಇವುಗಳ ಮೇಲೆ ಜಾಹೀರಾತು ಪ್ರದರ್ಶನ ಮಾಡಲಿಚ್ಛಿಸುವ ಏಜೆನ್ಸಿಗಳು ಅಂತಹ ವಾಹನಗಳ ನೊಂದಣಿ ಸಂಖ್ಯೆಗಳೊಂದಿಗೆ ವಾಹನಗಳ ಪಟ್ಟಿಯನ್ನು ಮತ್ತು ಜಾಹೀರಾತು ಪ್ರದರ್ಶಿಸಲು ಇಚ್ಛಿಸಿರುವ ಅವಧಿಯನ್ನು ದಾಖಲಿಸಿ ಪಾಲಿಕೆಯ ಜಾಹೀರಾತು ಇಲಾಖೆಯಲ್ಲಿ ಲಭ್ಯವಿರುವ ನಿಗಧಿತ ನಮೂನೆಯಲ್ಲಿ ಅರ್ಜಿಯನ್ನು ಸಲ್ಲಿಸಬೇಕು. ಅರ್ಜಿಯ ಜೊತೆಯಲ್ಲಿ ಸದರಿ ವಾಹನಗಳ ಮಾಲೀಕರಿಂದ ವಾಹನದ ಸಂಖ್ಯೆ ಮತ್ತು ಜಾಹೀರಾತು ಪ್ರದರ್ಶಿಸಲು ಇಚ್ಛಿಸುವ ಅವಧಿ ಈ ವಿವರಗಳನ್ನೊಳಗೊಂಡ ನಿರಾಕ್ಷೇಪಣಾ ಪತ್ರವನ್ನು ಸಲ್ಲಿಸತಕ್ಕದ್ದು. ತದನಂತರ, ಪಾಲಿಕೆಯು ಅನ್ವಯಿಸುವ ತೆರಿಗೆಯನ್ನು ಲೆಕ್ಕ ಹಾಕಿ, ಏಜೆನ್ಸಿಗೆ ಲಿಖಿತ ಮೂಲಕ ತಿಳಿಸತಕ್ಕದ್ದು.

(vi) ಬೇಡಿಕೆ, ಹಕ್ಕುಪತ್ರ ಹೊರಡಿಸಿದ ಏಳು ದಿನಗಳೊಳಗಾಗಿ ಜಾಹೀರಾತು ತೆರಿಗೆಯನ್ನು ಠೇವಣಿ ಇಡಬೇಕು. ಇದನ್ನು ಪಾಲಿಸದಿದ್ದಲ್ಲಿ, ಪಾಲಿಕೆಯು ದಿನವೊಂದಕ್ಕೆ ಪ್ರತಿ ವಾಹನಕ್ಕೆ ರೂ.500/- ನಂತೆ ದಂಡ ವಿಧಿಸುವುದು.

(vii) ಈ ಬೈಲಾ ಅಡಿಯಲ್ಲಿ ಜಾಹೀರಾತು ಪ್ರದರ್ಶನಕ್ಕೆ ಪರವಾನಿಗೆ ಹೊಂದಿರುವ ವಾಹನಗಳಲ್ಲಿ, ಪರವಾನಿಗೆ ಸಂಖ್ಯೆ ಮತ್ತು ಏಜೆನ್ಸಿಯ ಹೆಸರು, ಈ ವಿವರಗಳನ್ನು ಬೈಲಾದಲ್ಲಿರುವ ಅನುಬಂಧ 13 ರಲ್ಲಿ ತಿಳಿಸಿರುವ ರೀತಿಯಲ್ಲಿ. ಆದರೆ ಫಲಕದ/ಟ್ರಾನ್ಸ್‌ಲೈಟಿನ ಮೇಲ್ಭಾಗದಲ್ಲಿ ಪ್ರದರ್ಶಿಸತಕ್ಕದ್ದು.

(viii) ಮೊಬೈಲ್ ಜಾಹೀರಾತುಗಳು, ತಯಾರಿಕೆದಾರರು ಅವರುಗಳ ಉತ್ಪನ್ನಗಳನ್ನು ಸಾಗಣೆ ಮಾಡುವ ವಾಹನಗಳನ್ನು ಒಳಗೊಂಡಿರುತ್ತದೆ. ಆದಾಗ್ಯೂ ಇಂತಹ ಪ್ರಕರಣಗಳಲ್ಲಿ, ಜಾಹೀರಾತುಗಳನ್ನು ಸ್ವಫಲಕಗಳ ರೀತಿಯಲ್ಲಿ ಪರಿಗಣಿಸಲಾಗುತ್ತದೆ.
ಆದರೆ ಇಂತಹ ಫಲಕಗಳ ಪ್ರದರ್ಶನಕ್ಕೆ ಆಯುಕ್ತರ ಪೂರ್ವಾನುಮತಿಯ ಅವಶ್ಯಕತೆ ಇರುತ್ತದೆ. ಮತ್ತು ಮೊಬೈಲ್ ಜಾಹೀರಾತುಗಳಿಗೆ ವಿಧಿಸುವ ಜಾಹೀರಾತು ತೆರಿಗೆ ಪ್ರಮಾಣ ಅನ್ವಯಿಸುತ್ತದೆ.

(ix) ಯಾವುದೇ ಮೊಬೈಲ್ ಜಾಹೀರಾತು ಪ್ರದರ್ಶನಗಳು ಸಂಚಾರ ದಟ್ಟಣೆಗೆ ಕಾರಣವಾಗುತ್ತದೆ ಅಥವಾ ಅರ್ಜಿಯಲ್ಲಿ ಕೋರಿರುವ ಸ್ಥಳಗಳು, ವಿವಿಧ ವಾಣಿಜ್ಯ ಸ್ಥಳಗಳು ಎಂದು ಆಯುಕ್ತರು ಅಭಿಪ್ರಾಯ ಹೊಂದಿದಲ್ಲಿ ಆಯುಕ್ತರ ವಿವೇಚನೆಗೆ ಒಳಪಟ್ಟಂತೆ ಇಂತಹ ಜಾಹೀರಾತುಗಳನ್ನು ತಿರಸ್ಕರಿಸಬಹುದಾಗಿದೆ.

I. ಬ್ಯಾನರ್ಸ್, ತಾತ್ಕಾಲಿಕ ಕಮಾನುಗಳು ಮತ್ತು ಫಲಕಗಳು, (Buidling Wraps) ಕಟ್ಟಡಕ್ಕೆ ಸುತ್ತಿರುವ ಮೂಲಕ ಪ್ರದರ್ಶಿಸುವ ಜಾಹೀರಾತುಗಳ ಪ್ರಮಾಣಗಳು:

(i) ಯಾವುದೇ ವ್ಯಕ್ತಿಯು, ಬ್ಯಾನರ್‌ಗಳು, ತಾತ್ಕಾಲಿಕ ಕಮಾನುಗಳು, ತಾತ್ಕಾಲಿಕ ಫಲಕಗಳು, ಕಟ್ಟಡಗಳು ಇವುಗಳ ಮೇಲೆ ಯಾವುದೇ ದಾಖಲೆಯನ್ನು ಅಳವಡಿಸಲು, ದಾಖಲಿಸಲು, ನಾಟಲು, ಇಡಲು ಅಥವಾ ಜಾಹೀರಾತುಗಳನ್ನು ಪ್ರದರ್ಶಿಸಲು ಇಚ್ಛಿಪಟ್ಟಲ್ಲಿ, ಜಾಹೀರಾತು ಅಳವಡಿಸುವ ಅಥವಾ ಜಾಹೀರಾತಿನ ಪತ್ರಗಳನ್ನು ಮುದ್ರಿಸುವ ಅಥವಾ ಜಾಹೀರಾತುಗಳನ್ನು ಪೇಂಟು ಮಾಡುವ ಅಥವಾ ಯಾವುದೇ ರೀತಿಯಲ್ಲಿ ಪ್ರದರ್ಶಿಸುವ ಕನಿಷ್ಟ ಹದಿನೈದು ಕಾರ್ಯನಿರ್ವಹಣಾ ದಿನಗಳ ಪೂರ್ವದಲ್ಲಿ ಪಾಲಿಕೆಯ ಜಾಹೀರಾತು ಇಲಾಖೆಯಲ್ಲಿ ಲಭ್ಯವಿರುವ ಅರ್ಜಿಯನ್ನು (ಅನುಬಂಧ-4ರಲ್ಲಿ ನಿಗಧಿಪಡಿಸಿರುವ ರೀತಿಯಲ್ಲಿ) ಆಯುಕ್ತರಿಗೆ ಸಲ್ಲಿಸಿ ಪಾಲಿಕೆಯಲ್ಲಿ ಏಜೆನ್ಸಿಯೆಂದು ನೊಂದಣಿ ಮಾಡಿಸಿಕೊಳ್ಳಬೇಕು.
ಇಂತಹ ಪರವಾನಿಗೆ, ಯಾವುದೇ ಯೋಜನೆ ಅಥವಾ ಉತ್ಪನ್ನಗಳ ಅಭಿವೃದ್ಧಿಗೆ ಸೀಮಿತ ಅಥವಾ ಸೀಮಿತವಲ್ಲದ ಅವಧಿಗೆ ಯಾವುದೇ ವಸ್ತು ಅಥವಾ ಸೇವೆ ಲಭ್ಯವಿರುವ ಅಂಗಡಿಯ ಆವರಣದಲ್ಲಿ ಅಥವಾ ಸಾರ್ವಜನಿಕ ಸ್ಥಳಗಳಲ್ಲಿ ಪ್ರದರ್ಶಿಸುವ ಎಲ್ಲಾ ವಿಧದ ಜಾಹೀರಾತುಗಳಿಗೆ ಅನ್ವಯಿಸುತ್ತದೆ.

(ii) ಆಯುಕ್ತರು, ಸಕಾರಣಗಳಿಗಾಗಿ, ಕೆಲವು ವಿಶೇಷ ಪ್ರಕರಣಗಳಲ್ಲಿ ನಿಗಧಿತ ಅವಧಿಯನ್ನು ಕಡಿಮೆ ಮಾಡಬಹುದು ಅಥವಾ ಕೆಲವು ನಿರ್ದಿಷ್ಟ ಸ್ಥಳಗಳಲ್ಲಿ ಜಾಹೀರಾತು ಪ್ರದರ್ಶನವನ್ನು ನಿಷೇಧಿಸಬಹುದಾಗಿದೆ.

(iii) ಮೇಲೆ ತಿಳಿಸಿರುವ ಯಾವುದೇ ಜಾಹೀರಾತಿನ ಅಳವಡಿಕೆ ಮತ್ತು ಪ್ರದರ್ಶನದಿಂದಾಗಿ, ಪರವಾನಿಗೆ ಹೊಂದಿದ್ದು, ಚಾಲ್ತಿಯಲ್ಲಿರುವ ಯಾವುದೇ ಫಲಕವನ್ನು ಮರೆಮಾಡತಕ್ಕದ್ದಲ್ಲ ಅಥವಾ ಜಾಹೀರಾತಿನ ಪ್ರದರ್ಶನಕ್ಕೆ ಅಡ್ಡಿ ಮಾಡತಕ್ಕದ್ದಲ್ಲ.

(iv) ಒಂದು ವೇಳೆ ಪ್ರಸ್ತಾಪಿಸಿರುವ ಜಾಹೀರಾತು ಬ್ಯಾನರ್‌ಗಳನ್ನು ಅನುಮೋದಿಸಿದಲ್ಲಿ ಆಯುಕ್ತರು ಅರ್ಜಿ ಅಥವಾ ಮನವಿ ಪತ್ರ ತಲುಪಿದ ನಾಲ್ಕು ದಿನಗಳೊಳಗಾಗಿ ಅರ್ಜಿ ಅನುಮೋದಿತವಾದಂತಹ ಪ್ರಕರಣಗಳಲ್ಲಿ ಪ್ರದರ್ಶಿಸಲು ಇಚ್ಛಿಸಿರುವ ಜಾಹೀರಾತಿಗೆ ನೀಡಬೇಕಾಗುವ ತೆರಿಗೆಯ ಬಗ್ಗೆ ಅರ್ಜಿದಾರರಿಗೆ ತಿಳಿಸತಕ್ಕದ್ದು.

(v) ಆಯುಕ್ತರು ನಿರ್ಧರಿಸಿದಂತೆ ಜಾಹೀರಾತು ತೆರಿಗೆ ಸ್ವೀಕರಿಸಿದ ನಂತರ, ಅರ್ಜಿದಾರರಿಗೆ, ಜಾಹೀರಾತು ಪ್ರಾರಂಭಿಸುವ ದಿನಾಂಕ ಮತ್ತು ಅಂತ್ಯಗೊಳಿಸುವ ದಿನಾಂಕ ಈ ವಿವರಗಳನ್ನೊಳಗೊಂಡ ಲಿಖಿತ ಪರವಾನಿಗೆಯನ್ನು ನೀಡಲಾಗುವುದು. ಜಾಹೀರಾತುದಾರರು, ಪ್ರದರ್ಶನಕ್ಕಾಗಿ ಮುದ್ರಿಸುವ ಜಾಹೀರಾತು ಪ್ರತಿಗಳಲ್ಲಿ ಅಥವಾ ಮಾಡುವ ಪೇಂಟುಗಳ ಮೇಲೆ, ಪರವಾನಿಗೆಯ ನೊಂದಣಿ ಸಂಖ್ಯೆ ಮತ್ತು ದಿನಾಂಕಗಳನ್ನು ಸೇರಿಸಬೇಕು ಅಥವಾ ಜಾಹೀರಾತು ಪ್ರತಿಗಳ ಮೇಲೆ ತೆರಿಗೆ ಪಾವತಿ ಮಾಡಿರುವ ಬಗ್ಗೆ ಪಾಲಿಕೆಯ ಸ್ಟ್ಯಾಂಪ್ ಲಗತ್ತಿಸಿಕೊಳ್ಳಬೇಕು ಹಾಗೂ ಜಾಹೀರಾತುದಾರರು ಎಲ್ಲಾ ನಿರ್ದೇಶನಗಳನ್ನು ಪಾಲಿಸಬೇಕು.

(vi) ಮೊದಲು ನೋಟೀಸು ಕೊಡಲು ಸಾಧ್ಯವಾಗದಂತಹ ಪ್ರಕರಣಗಳಲ್ಲಿ ಅಳವಡಿಸಲು, ದಾಖಲಿಸಲು, ಸ್ಥಿರಪಡಿಸಲು ಅಥವಾ ಪ್ರದರ್ಶಿಸಲು ಪ್ರಸ್ತಾಪಿಸಿದ ಜಾಹೀರಾತು ಪ್ರತಿಗಳನ್ನು ನಿಗಧಿತ ಅರ್ಜಿಯೊಂದಿಗೆ ಸದರಿ ಉಪ ಪರಿಚ್ಛೇದದಲ್ಲಿ ತಿಳಸಿರುವ ಮೇರೆಗೆ ಅನುಮೋದನೆಗಾಗಿ ಸಲ್ಲಿಸಬೇಕು. ಆಯುಕ್ತರು ಅನುಮೋದಿಸಿದ ನಂತರದಲ್ಲಿ ಮತ್ತು ಸದರಿ ಜಾಹೀರಾತಿನ ಸಂಬಂಧ, ತೆರಿಗೆಯನ್ನು ಪಾವತಿಸಿದ ನಂತರ ಎಲ್ಲಾ ಜಾಹೀರಾತು ಪ್ರತಿಗಳಲ್ಲಿ ತೆರಿಗೆಯನ್ನು ಕಟ್ಟಿಕೊಂಡ ಬಗ್ಗೆ ಸ್ಟ್ಯಾಂಪ್ ಲಗತ್ತಿಸಬೇಕು.

(vii) 'ಎ' ವಲಯದಲ್ಲಿ ಹಾಗೂ ಎಂ.ಜಿ. ರಸ್ತೆ, ಏರ್‌ಪೋರ್ಟ್ ರಸ್ತೆ, ಬ್ರಿಗೇಡ್ ರಸ್ತೆ, ಕಬ್ಬನ್ ರಸ್ತೆ, ಕಾಮರಾಜ ರಸ್ತೆ ಮತ್ತು ಡಿಕ್ಕನ್ಸನ್ ರಸ್ತೆ ಜಂಕ್ಷನ್ ಬಳಿಯಲ್ಲಿ ಪಾಲಿಕೆಯ ಕೇಂದ್ರ ಕಛೇರಿಯ ಎದುರು, ಕೆ.ಆರ್. ವೃತ್ತ, ವಿಧಾನಸೌಧದ ಸುತ್ತಲು, 500 ಮೀಟರ್ ಅಂತರದಲ್ಲಿ ಹಡ್ಸನ್ ವೃತ್ತ, ಬಸವೇಶ್ವರ ವೃತ್ತ, ಕೆ.ಜಿ.ವೃತ್ತ, ಸರ್ಕಾರಿ ಕಛೇರಿಗಳ ಆವರಣ, ಪಾಲಿಕೆ ಕಛೇರಿ ಆವರಣ, ಇವುಗಳಲ್ಲಿ ಬ್ಯಾನರ್ಸ್‌ಗಳ ಪ್ರದರ್ಶನವನ್ನು ನಿಷೇಧಿಸತಕ್ಕದ್ದು.

J. ಗಾಳಿ ತುಂಬಿರುವ ಮಾಧ್ಯಮದಲ್ಲಿ (ಬಲೂನುಗಳ ಮೇಲೆ) ಪ್ರದರ್ಶಿಸುವ ಜಾಹೀರಾತುಗಳ ಬಗ್ಗೆ ಪ್ರಮಾಣಗಳುಃ

(i) ಏಜೆನ್ಸಿಯು ಪ್ರದರ್ಶಿಸುವ ಗಾಳಿ ತುಂಬಿರುವ ಮಾಧ್ಯಮಗಳನ್ನು (ಬಲೂನುಗಳನ್ನು) ಇತರೇ ಜಾಹೀರಾತುಗಳ ಪ್ರದರ್ಶನಕ್ಕೆ ಅನ್ವಯವಾಗದಂತೆ ಅಡೆತಡೆಯಾಗದಂತೆ ಅಥವಾ ಹಾನಿಯಾಗದಂತೆ ಪ್ರದರ್ಶಿಸತಕ್ಕದ್ದು.

(ii) ಏಜೆನ್ಸಿಯು, ಬಲೂನುಗಳ ಮುಖಾಂತರ ಜಾಹೀರಾತುಗಳನ್ನು ಪ್ರದರ್ಶಿಸಿದಂತಹ ಪ್ರಕರಣಗಳಲ್ಲಿ ತುರ್ತು ಪರಿಸ್ಥಿತಿಯನ್ನು ನಿಭಾಯಿಸಲು ಅನುಕೂಲವಾಗುವಂತೆ ಬಲೂನನ್ನು ವೀಕ್ಷಿಸಲು, ಸುರಕ್ಷಿತವಾಗಿ ಎಳೆಯಲು ಮತ್ತು ಯಾವುದೇ ವಿದ್ಯುತ್ ಹರಿಯುತ್ತಿರುವ ತಂತಿಗೆ ಅಥವಾ ಫಲಕಗಳಿಗೆ ತಾಗದಂತಿರಲು ಅವಶ್ಯಕ ವ್ಯವಸ್ಥೆಗಳನ್ನು ಮಾಡಿರಬೇಕು.

(iii) ಏಜೆನ್ಸಿಯು, ಸರ್ಕಾರದ ಸಿವಿಲ್ ಏವಿಯೇಷನ್ (ನಾಗರೀಕ ವಿಮಾನಯಾನ) ಇಲಾಖೆಯಿಂದ ನಿರಾಕ್ಷೇಪಣಾ ಪತ್ರ ಪಡೆದು ಸಲ್ಲಿಸಬೇಕು ಮತ್ತು ಸಂಬಂಧಪಟ್ಟ ಎಲ್ಲಾ ನಿಯಮಗಳ ಮತ್ತು ನಿಯಮಾವಳಿಗಳನ್ನು ಪಾಲಿಸಬೇಕು.

(iv) ಬಲೂನಿನಿಂದಾಗಿ ಅಥವಾ ಬಲೂನಿಗೆ ಉಪಯೋಗಿಸಿರುವ ಪದಾರ್ಥ, ಅನಿಲ ಅಥವಾ ಸಲಕರಣೆಯಿಂದಾಗಲಿ ಅಥವಾ ಬಿರುಗಾಳಿ ದೋಷಪೂರಿತ ರಚನೆ, ನಿಷ್ಕಾಳಜಿ, ಅಪಘಾತ ಅಥವಾ ಇತರೇ ಕಾರಣಗಳಿಂದಾಗಿ ಬಲೂನು ಅಥವಾ ಅದರ ಭಾಗ ಬೀಳುವದರಿಂದ ಅಥವಾ ಬೇರೆ ಕಾರಣಗಳಿಂದಾಗಲಿ ಯಾವುದೇ ಸ್ವತ್ತು ಅಥವಾ ವ್ಯಕ್ತಿಗೆ ಹಾನಿ ಆದಲ್ಲಿ ಏಜೆನ್ಸಿಯು ಸದರಿ ಹಾನಿಯನ್ನು ಭರಿಸಬೇಕಾಗುತ್ತದೆ.

K. ದಿಕ್ಸೂಚಿ ಫಲಕಗಳನ್ನು ಅಳವಡಿಸುವ ಮತ್ತು ಪ್ರದರ್ಶಿಸುವ ಕುರಿತಾದ ಪ್ರಮಾಣಗಳುಃ

(i) ತುರ್ತು ಪರಿಸ್ಥಿತಿಗೆ ಅವಶ್ಯಕವಾಗಿರುವ ಆರೋಗ್ಯ, ಸಾರ್ವಜನಿಕ ಸುರಕ್ಷೆ ಮತ್ತು ಸಾರ್ವಜನಿಕರ ಅನುಕೂಲಕ್ಕಾಗಿರುವ ಸಂಸ್ಥೆಗಳು, ಅಂದರೆ ಆಸ್ಪತ್ರೆ, ರಕ್ತದಾನ ಕೇಂದ್ರಗಳು, ಆರಕ್ಷಕ ಠಾಣೆಗಳು, ಶೌಚಾಲಯಗಳು ಇತ್ಯಾದಿಗಳಿಗೆ ಹೋಗಲು ಅನುಸರಿಸಬೇಕಾದ ದಾರಿ ಸೂಚಿಸುವ ಉದ್ದೇಶದಿಂದ ದಿಕ್ಸೂಚಿ ಫಲಕಗಳಿಗೆ ಪರವಾನಿಗೆ ನೀಡಲಾಗುತ್ತದೆ.

(ii) ಆಯುಕ್ತರ ಲಿಖಿತ ಪರವಾನಿಗೆ ಇಲ್ಲದ ಹೊರತು ಯಾವುದೇ ದಿಕ್ಸೂಚಿ ಫಲಕಗಳನ್ನು ಪ್ರದರ್ಶಿಸತಕ್ಕದ್ದಲ್ಲ.

(iii) ಇಂತಹ ಫಲಕಗಳಿಗೆ, ವಾಣಿಜ್ಯ ಫಲಕಗಳಿಗೆ ವಿಧಿಸುವ ತೆರಿಗೆ ದರದಲ್ಲಿಯೇ ತೆರಿಗೆಯನ್ನು ವಿಧಿಸಲಾಗುತ್ತದೆ.

(iv) ವಾರ್ಷಿಕ ತೆರಿಗೆಯನ್ನು ಮುಂಗಡವಾಗಿ ಪ್ರತಿ ವರ್ಷದ ಏಪ್ರಿಲ್ ತಿಂಗಳ 30ನೆಯ ತಾರೀಖಿನೊಳಗಾಗಿ ಪಾವತಿಸಬೇಕಾಗುತ್ತದೆ.

(v) ಪ್ರತಿ ಆರ್ಥಿಕ ಸಾಲಿನ ಏಪ್ರಿಲ್ ಒಂದರಿಂದ ಮಾರ್ಚ್ 31ರ ಅವಧಿಗೆ ಪರವಾನಿಗೆ ನೀಡಲಾಗುವುದು ಮತ್ತು ಜಾಹೀರಾತು ತೆರಿಗೆಯನ್ನು ಗೊತ್ತುಪಡಿಸಲಾಗುವುದು.

(vi) ದಿಕ್ಸೂಚಿ ಫಲಕಗಳು ಯಾವ ಉತ್ಪನ್ನ ಮತ್ತು ಸೇವೆ ಲಭ್ಯವಿದೆ ಮತ್ತು ಲಭ್ಯವಿರುವ ಆವರಣದ ನಿರ್ದಿಷ್ಟ ಸ್ಥಳ ಇವುಗಳ ವಿವರಗಳನ್ನು ಮಾತ್ರ ಪ್ರದರ್ಶಿಸಬೇಕು.

(vii) ಯಾವುದೇ ದಿಕ್ಸೂಚಿ ಫಲಕಕ್ಕೆ ಸಂಬಂಧಿಸಿದಂತೆ ಜಾಹೀರಾತು ತೆರಿಗೆ ಪಾವತಿ ಮಾಡದೇ ಇರುವುದು ಕಂಡು ಬಂದಲ್ಲಿ ರೂ.500/- ದಂಡ ಭರಿಸುವುದರೊಂದಿಗೆ ತೆರಿಗೆ ಲೆಕ್ಕಾಚಾರದ ವರ್ಷದ ಸಂಪೂರ್ಣ ತೆರಿಗೆಯನ್ನು ಏಳು ಕೆಲಸದ ದಿನಗಳೊಳಗಾಗಿ ಪಾವತಿ ಮಾಡಬೇಕಾಗುತ್ತದೆ. ತಪ್ಪಿದಲ್ಲಿ ವಾಣಿಜ್ಯ ಫಲಕಗಳಿಗೆ ನಿಗಧಿಪಡಿಸಿರುವ ದಂಡನೆಗಳು (ನಿಯಮ 16(i)(ii)) ಅನ್ವಯವಾಗುತ್ತದೆ.

(viii) 1ಮೀ X 1 ಮೀ ಗಾತ್ರಕ್ಕಿಂತ ಹೆಚ್ಚಿನ ಅಳತೆಯ ದಿಕ್ಸೂಚಿ ಫಲಕಗಳಿಗೆ ಅನುಮತಿಸತಕ್ಕದ್ದಲ್ಲ.

(ix) ದಿಕ್ಸೂಚಿ ಫಲಕಗಳನ್ನು ಸಾರ್ವಜನಿಕ ಕಾಲುದಾರಿಗಳ ಮೇಲೆ ಅನುಮತಿಸತಕ್ಕದ್ದಲ್ಲ.

L. ಪಾಲಿಕೆಯ ಸ್ವತ್ತುಗಳ ಮೇಲಿರುವ ವಿನ್ಯಾಸಗಳಲ್ಲಿ ಪ್ರದರ್ಶಿಸುವ ಜಾಹೀರಾತುಗಳ ಕುರಿತಾದ ಪ್ರಮಾಣಗಳುಃ

(i) ಪರವಾನಿಗೆಯ ನಿಬಂಧನೆಗನುಗುಣವಾಗಿರುವ ಜಾಹೀರಾತುಗಳನ್ನು ಹೊರತುಪಡಿಸಿ, ಇತರೆ ಯಾವುದೇ ಜಾಹೀರಾತು ಫಲಕವನ್ನು ಜಾಹೀರಾತು ಪ್ರದರ್ಶಿಸುವ ಉದ್ದೇಶದಿಂದ ಯಾವುದೇ ವ್ಯಕ್ತಿಯಾಗಲಿ, ವಾಹನವಾಗಲಿ ಅಥವಾ ಇತರೇ ತಂತ್ರದಿಂದಾಗಲಿ ಇವುಗಳ ಮೂಲಕ ಯಾವುದೇ ಬೀದಿ ಅಥವಾ ಸಾರ್ವಜನಿಕ ಸ್ಥಳಗಳಲ್ಲಿ ಸಾಗಿಸತಕ್ಕದ್ದಲ್ಲ.

(ii) ಪಾಲಿಕೆಯ ಸ್ವತ್ತುಗಳಲ್ಲಿ ಅಂದರೆ ಬಸ್ ತಂಗುದಾಣಗಳಲ್ಲಿ ಪಾದಚಾರಿ ಮೇಲ್ಸೇತುವೆಗಳು, ಗ್ಯಾಂಟ್ರಿಗಳು, ಪೊಲೀಸ್ ಕಿಯೋಸ್ಕ್‌ಗಳು, ದೂರವಾಣಿ ಕಿಯೋಸ್ಕ್‌ಗಳು, ಸಾರ್ವಜನಿಕ ಸೌಕರ್ಯಗಳು, ಬೀದಿ ಪೀಠೋಪಕರಣಗಳು, ಇತ್ಯಾದಿಗಳ ಮೇಲಿರುವ ವಿನ್ಯಾಸಗಳ ಮೇಲೆ ಜಾಹೀರಾತುಗಳ ಪ್ರದರ್ಶನವನ್ನು ನಿಷೇಧಿಸಲಾಗಿದೆ. ಆದಾಗ್ಯೂ ವಿಶೇಷ ಸಂದರ್ಭಗಳಲ್ಲಿ ಪಾಲಿಕೆಯ ಹಿತದೃಷ್ಟಿಯಿಂದ (ಉದಾಃ ಮೂಲ ಸೌಕರ್ಯಗಳ ನಿರ್ಮಾಣದಲ್ಲಿ ಸಾರ್ವಜನಿಕ-ಖಾಸಗಿ ಸಹಭಾಗಿತ್ವ) ಆಯುಕ್ತರು ಪರಿಶೀಲಿಸಿ ಅನುಮತಿಸಿದಲ್ಲಿ ಅಂತಹ ಜಾಹೀರಾತುಗಳಿಗೆ ಪರವಾನಿಗೆ ನೀಡಬಹುದಾಗಿದೆ. ಆಯುಕ್ತರು ಕಾಲಕಾಲಕ್ಕೆ ನೀಡುವ ಮಾರ್ಗದರ್ಶನಗಳ ಆಧಾರದ ಮೇಲೆ ಇಂತಹ ಪ್ರಕರಣಗಳನ್ನು ಪರಿಗಣಿಸಬೇಕಾಗುತ್ತದೆ.

M. ಅಂಗಡಿ ಮುಂಗಟ್ಟುಗಳು, ರೆಸ್ಟೋರೆಂಟ್‌ಗಳು, ಹೋಟೆಲ್‌ಗಳು ಹಾಗೂ ಇತರೇ ವ್ಯವಹಾರ ಮತ್ತು ವಾಣಿಜ್ಯ ಸಂಸ್ಥೆಗಳು, ಇತ್ಯಾದಿಗಳಲ್ಲಿ ಪ್ರದರ್ಶಿಸುವ ಭಾರಿ ಸ್ವಜಾಹೀರಾತುಗಳಿಗೆ ಮಾತ್ರ ಅನ್ವಯಿಸುವ ಪ್ರಮಾಣಗಳು.

(i) ಭಾರಿ ಸ್ವಜಾಹೀರಾತುಗಳು ಕಟ್ಟಡದ ಅಂಚಿನಿಂದ ಅಥವಾ ಸ್ವತ್ತಿನ ಅಂಚಿನಿಂದ ಹೊರಗೆ ಚಾಚತಕ್ಕದ್ದಲ್ಲ. ಭಾರಿ ಸ್ವಜಾಹೀರಾತುಗಳಿಗೆ ಜಾಹೀರಾತು ತೆರಿಗೆ ಅನ್ವಯವಾಗುತ್ತದೆ. ಆದರೆ ಯಾವುದೇ ಭಾರಿ ಸ್ವಜಾಹೀರಾತುಗಳ ಗಾತ್ರ 10 X 10 ಅಡಿಗಳಿಗೆ ಮೀರುವಂತಿಲ್ಲ.

(ii) ಭಾರಿ ಜಾಹೀರಾತುಗಳ ಜಾಹೀರಾತುದಾರರು, ಜಾಹೀರಾತು ಫಲಕಗಳ ಪಟ್ಟಿಯನ್ನು ಸಲ್ಲಿಸಲು ವಿಫಲವಾದಲ್ಲಿ, ಪ್ರತಿ ತಿಂಗಳು ರೂ.10,000/- ದಂಡ ಪಾವತಿ ಮಾಡಬೇಕಾಗುತ್ತದೆ.

(iii) ಯಾವುದೇ ಭಾರಿ ಸ್ವಜಾಹೀರಾತುಗಳಿಗಾಗಿ ಜಾಹೀರಾತು ತೆರಿಗೆ ಪಾವತಿ ಮಾಡದಿರುವುದು ಕಂಡುಬಂದಲ್ಲಿ ಅಂತಹ ಜಾಹೀರಾತುದಾರರು ತೆರಿಗೆ ಲೆಕ್ಕ ಹಾಕುವ ವರ್ಷದ ಸಂಪೂರ್ಣ ತೆರಿಗೆಯನ್ನು ಪಾವತಿ ಮಾಡಬೇಕಾಗುತ್ತದೆ ಅಲ್ಲದೆ ಆಯುಕ್ತರ ವಿವೇಚನೆಗೆ ಒಳಪಟ್ಟಂತೆ ಅವಶ್ಯವಿದ್ದಲ್ಲಿ ಅಂತಹ ಜಾಹೀರಾತು ಫಲಕಗಳನ್ನು ತೆಗೆಯಲಾಗುವುದು.

(iv) ಜಾಹೀರಾತು ಇಲಾಖೆಯ ಸಿಬ್ಬಂದಿವರ್ಗದವರು ತಪಾಸಣೆ ಮಾಡುವ ಸಮಯದಲ್ಲಿ ತಪ್ಪು ಮಾಹಿತಿ ನೀಡಿರುವುದು ಕಂಡುಬಂದಲ್ಲಿ ಸದರಿ ಸ್ಥಳದಲ್ಲಿ ಅನ್ವಯವಾಗುವ ಜಾಹೀರಾತು ತೆರಿಗೆಯ ಎರಡು ಪಟ್ಟು ತೆರಿಗೆಯನ್ನು ಪಾವತಿ ಮಾಡಬೇಕಾಗುತ್ತದೆ.

N. ಕ್ರೀಡಾಂಗಣದಲ್ಲಿರುವ ಹೊರಾಂಗಣ ಜಾಹೀರಾತುಗಳ ಬಗ್ಗೆ ಪ್ರಮಾಣಗಳು ಃ

ಕ್ರೀಡಾಂಗಣಗಳಲ್ಲಿ ಅಂದರೆ ಚಿನ್ನಸ್ವಾಮಿ ಕ್ರೀಡಾಂಗಣ, ಕಂಠೀರವ ಕ್ರೀಡಾಂಗಣ, ಫುಟ್‌ಬಾಲ್ ಕ್ರೀಡಾಂಗಣ ಮುಂತಾದವುಗಳಲ್ಲಿ ಯಾವುದೆ ಜಾಹೀರಾತನ್ನು ಆಯುಕ್ತರ ಪರವಾನಿಗೆ ಇಲ್ಲದೆ ಪ್ರದರ್ಶಿಸತಕ್ಕದ್ದಲ್ಲ. ಪಾಲಿಕೆಯ ಜಾಹೀರಾತು ಇಲಾಖೆಯಲ್ಲಿ ಲಭ್ಯವಿರುವ ಅರ್ಜಿ ನಮೂನೆಯಲ್ಲಿ ಅರ್ಜಿಯನ್ನು ಸಲ್ಲಿಸಿ ಪರವಾನಿಗೆಯನ್ನು ಪಡೆಯತಕ್ಕದ್ದು.

ಭಾಗ III : A. ಹೊರಾಂಗಣ ಜಾಹೀರಾತುಗಳ ಅಳವಡಿಕೆ ಮತ್ತು ಪ್ರದರ್ಶನಗಳಿಗೆ ಕಾರ್ಯವಿಧಾನ.

(i) ಫಲಕಗಳನ್ನು ರಸ್ತೆಗಳ ಕೂಡಿಕೆ ಅಥವಾ ವೃತ್ತದಿಂದ ಕನಿಷ್ಠ 40 ಅಡಿ ದೂರದಲ್ಲಿ ರಸ್ತೆಗೆ ಹೊಂದಿಕೊಂಡು ಅಳವಡಿಸಬೇಕಾಗುತ್ತದೆ. ವೃತ್ತಗಳ ಅಥವಾ ರಸ್ತೆಗಳ ಕೂಡಿಕೆಗಳ ಸುತ್ತಲು ಜಾಹೀರಾತು ಫಲಕಗಳ ಅಳವಡಿಕೆಗೆ ಅನುಮತಿ ನೀಡತಕ್ಕದ್ದಲ್ಲ.

(ii) ಇತರರ ವಾಣಿಜ್ಯ ಪ್ರಚಾರಕ್ಕಾಗಿ ವಾಣಿಜ್ಯಾತ್ಮಕ ಉದ್ದೇಶದಿಂದ, ವಾಣಿಜ್ಯ ಜಾಹೀರಾತು ಫಲಕಗಳನ್ನು ಅಳವಡಿಸಿ ಹೊರಾಂಗಣ ವಾಣಿಜ್ಯ ಜಾಹೀರಾತುಗಳನ್ನು ಪ್ರದರ್ಶಿಸುವ ಕಾರ್ಯ ನಿರ್ವಹಿಸುತ್ತಿರುವ ಯಾವುದೇ ವ್ಯಕ್ತಿ ಅಥವಾ ಕಂಪೆನಿಯು ಆಯುಕ್ತರು ಈ ಬೈಲಾಗಳನ್ನು ಗಮನದಲ್ಲಿರಿಸಿ ನಿರ್ಧರಿಸಿದಂತೆ ರೂ.5,000/-ಕ್ಕಿಂತ ಅಧಿಕವಲ್ಲದ ಮತ್ತು ರೂ.2,000/-ಕ್ಕಿಂತ ಕಡಿಮೆಯಲ್ಲದಷ್ಟು ನೊಂದಣಿ ಶುಲ್ಕವನ್ನು ಪಾವತಿಸಿ ಏಜೆನ್ಸಿಯೆಂದು ನೊಂದಣಿ ಮಾಡಿಸಿಕೊಳ್ಳಬೇಕಾಗುತ್ತದೆ.

ಮುಂದುವರೆದಂತೆ, ಪ್ರತಿ ಮೂರು ವರ್ಷಗಳಿಗೊಮ್ಮೆ ಜಾಹೀರಾತುದಾರರು ಅವರುಗಳ ಜಾಹೀರಾತು ಏಜೆನ್ಸಿಯನ್ನು ನಿರ್ದಿಷ್ಟ ನಿಯಮಗಳಿಗನುಸಾರವಾಗಿ ನವೀಕರಿಸಬೇಕಾಗಿರುತ್ತದೆ. ನೊಂದಣಿ ಅವಧಿಯು ಮೀರಿದಲ್ಲಿ ಬೈಲಾಗಳ ಉಲ್ಲಂಘನೆ ಎಂದು ಪರಿಗಣಿಸಿ ಉಲ್ಲಂಘನೆ ಮುಂದುವರೆಯುವ ಪ್ರತಿ ತಿಂಗಳಿಗೆ ರೂ.1,000/-ರಷ್ಟು ವಿಳಂಬ ಶುಲ್ಕವನ್ನು ವಿಧಿಸಬೇಕಾಗುತ್ತದೆ.

ಏಜೆನ್ಸಿಗಳನ್ನು ಹೊರಾಂಗಣ ಜಾಹೀರಾತು ಪ್ರದರ್ಶನಗಳಿಗೆ ನೊಂದಾಯಿಸುವ ವಿಷಯದಲ್ಲಿ ಆಯುಕ್ತರ ನಿರ್ಧಾರವೇ ಅಂತಿಮವಾಗಿರುತ್ತದೆ. ಆದಾಗ್ಯೂ ಯಾವುದೇ ಅರ್ಜಿಯನ್ನು ತಿರಸ್ಕರಿಸಿದಲ್ಲಿ ಕಾರಣಗಳು ಲಿಖಿತ ಮುಖೇನ ಸಂಬಂಧಪಟ್ಟವರಿಗೆ ತಿಳಿಸಲಾಗುವುದು. ತದನಂತರ ಏಳು ದಿನಗಳೊಳಗಾಗಿ ಏಜೆನ್ಸಿಯು ಆಯುಕ್ತರಿಗೆ ಅವರ ನಿರ್ಣಯದ ಮರು ಪರಿಶೀಲನೆ ಕೋರಿ ಅರ್ಜಿ ಸಲ್ಲಿಸಬಹುದಾಗಿದೆ.

(iii) ಏಜೆನ್ಸಿಗಳು ವಾಣಿಜ್ಯ ಜಾಹೀರಾತುಗಳನ್ನು ಪ್ರದರ್ಶಿಸುವ ಅಥವಾ ಪ್ರದರ್ಶಿಸಲು ತಿಳಿಸುವ ಪೂರ್ವದಲ್ಲಿ ನಿರ್ದಿಷ್ಟ ತೆರಿಗೆ ಪಾವತಿ ಮಾಡಿರುವ ಬಗ್ಗೆ , ಆಯುಕ್ತರಿಂದ ಅನುಮೋದನೆ ಪಡೆದ ಬಗ್ಗೆ ಹಾಗೂ ಈ ಬೈಲಾಗಳಲ್ಲಿಯ ಅವಕಾಶದಂತೆ ಫಲಕದ ತಪಾಸಣೆ ಆಗಿರುವ ಬಗ್ಗೆ ಖಚಿತಪಡಿಸಿಕೊಳ್ಳಬೇಕು.

(iv) ಏಜೆನ್ಸಿಗಳು ಅನುಮತಿಸಿರುವ ಫಲಕಗಳ ಬಗ್ಗೆ ಸರಿಯಾದ ಲೆಕ್ಕಾಚಾರವಿಡಬೇಕು ಮತ್ತು ಅಗತ್ಯ ಸಮಯದಲ್ಲಿ ಆಯುಕ್ತರ ತಪಾಸಣೆಗಾಗಿ ಹಾಜರುಪಡಿಸಬೇಕು.

(v) ಪಾಲಿಕೆಯಲ್ಲಿ ನೊಂದಣಿ ಮಾಡಿಕೊಂಡಿರುವ/ಸದಸ್ಯತ್ವ ಹೊಂದಿರುವ ಏಜೆನ್ಸಿಗಳಿಗೆ ಮಾತ್ರ ವಾಣಿಜ್ಯ ಫಲಕಗಳ ಅಳವಡಿಕೆ/ ಪ್ರದರ್ಶನಕ್ಕೆ ಪರವಾನಿಗೆ ನೀಡಲಾಗುತ್ತದೆ.

(vi) ಏಜೆನ್ಸಿಯು ನಿರ್ದಿಷ್ಟ ನೊಂದಣಿ ಶುಲ್ಕ ಪಾವತಿ ಮಾಡಿದಲ್ಲಿ ಮತ್ತು ಏಜೆನ್ಸಿಯು ಈ ಬೈಲಾಗಳನ್ನು ಪಾಲಿಸಿದ ಕುರಿತು ದಾಖಲೆಗಳು ಇರುವ ಬಗ್ಗೆ ಆಯುಕ್ತರು ತೃಪ್ತಿ ಹೊಂದಿದಲ್ಲಿ, ಐದು ವರ್ಷಗಳಿಗೊಮ್ಮೆ ನೊಂದಣಿಯನ್ನು ನವೀಕರಿಸಬೇಕಾಗುತ್ತದೆ.

ಮುಂದುವರೆದಂತೆ, ಏಜೆನ್ಸಿಯು ನೋಂದಣಿಯ ನವೀಕರಣಕ್ಕಾಗಿ ಅರ್ಜಿ ಸಲ್ಲಿಸುವ ಮೊದಲು ಈ ಕೆಳಕಂಡ ಷರತ್ತುಗಳನ್ನು ಪೂರೈಸಬೇಕಾಗುತ್ತದೆ.

(vii) ಯಾವುದೇ ಬೈಲಾಗಳನ್ನು ಉಲ್ಲಂಘಿಸಿರಬಾರದು ಮತ್ತು ನ್ಯಾಯಾಲಯದಲ್ಲಿ ಏಜೆನ್ಸಿಯು ಯಾವುದೇ ದಾವೆ ಹೂಡಿದಲ್ಲಿ ಸದರಿ ಪ್ರಕರಣಗಳು ಇತ್ಯರ್ಥವಾಗಿರಬೇಕು.

(viii) ಏಜೆನ್ಸಿಯು, ಬೆಂಗಳೂರು ಮಹಾನಗರ ಪಾಲಿಕೆಗೆ ಪಾವತಿಸಬೇಕಾಗಿರುವ ಯಾವುದೇ ತೆರಿಗೆ ಬಾಕಿ ಇರಕೂಡದು ಇದನ್ನು ಪಾಲಿಸದಿದ್ದ ಪಕ್ಷದಲ್ಲಿ ಏಜೆನ್ಸಿಯು ನೊಂದಣಿಗಾಗಿ ಸಲ್ಲಿಸಿದ ಅರ್ಜಿ ತಿರಸ್ಕೃತವಾಗುವುದು ಮತ್ತು ಪಾಲಿಕೆಯು ನೀಡಿರುವ ಎಲ್ಲಾ ಪರವಾನಿಗೆಗಳನ್ನು ಹಿಂದಕ್ಕೆ ಪಡೆಯಲು ಕಾರಣವಾಗುವುದು.

(ix) ವಾಣಿಜ್ಯ ಜಾಹೀರಾತು ಫಲಕಗಳ ಅಳವಡಿಕೆ ಹಾಗೂ ಪ್ರದರ್ಶನಕ್ಕಾಗಿ ಸಲ್ಲಿಸುವ ಎಲ್ಲಾ ಹೊಸ ಅರ್ಜಿಗಳನ್ನು ಆಯುಕ್ತರು ನಿಗಧಿಪಡಿಸಿರುವ ಅರ್ಜಿ ನಮುನೆಯಲ್ಲಿ ಈ ಕೆಳಕಂಡ ಸಮರ್ಥಿಸುವ ದಾಖಲೆಗಳೊಂದಿಗೆ ಸಲ್ಲಿಸಬೇಕು.

a. ಸ್ವತ್ತಿನ ಮಾಲೀಕರಿಂದ ನಿರಾಕ್ಷೇಪಣಾ ಪ್ರಮಾಣ ಪತ್ರ (ಅನುಬಂಧ 8 ರಲ್ಲಿರುವ ನಮೂನೆಯಲ್ಲಿ)

b. ಫಲಕವನ್ನು ಅಳವಡಿಸಲು ಪ್ರಸ್ತಾಪಿಸಿರುವ ಸ್ಥಳದ ನಕ್ಷೆ (site plan) ಅಂದರೆ ರಸ್ತೆ/ ಕೂಡಿಕೆಗಳಿಂದ ಇರುವ ಅಂತರ ಮತ್ತು ಮೈದಾನ ಅಥವಾ ಕಟ್ಟಡದ ನಿರ್ದಿಷ್ಟ ಸ್ಥಳ ಇತ್ಯಾದಿಗಳನ್ನೊಳಗೊಂಡಿರುವುದು.

c. ಒಂದು ವೇಳೆ ಕಟ್ಟಡದ ಮೇಲ್ಛಾವಣಿಯ ಸ್ಥಳದಲ್ಲಿ ಅಳವಡಿಸಲು ಪ್ರಸ್ತಾವನೆ ಸಲ್ಲಿಸಿದಲ್ಲಿ ಫಲಕದ ಅಡಿಪಾಯ ಮತ್ತು ಜಾಹೀರಾತು ಫಲಕದ ವಿನ್ಯಾಸದ ಯೋಜನೆಯ ವಿವರಗಳನ್ನೊಗೊಂಡ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪಾಲಿಕೆಯ ಸಹಾಯಕ ಅಭಿಯಂತರರಿಂದ ಧೃಢೀಕರಿಸಿ ಸಲ್ಲಿಸಬೇಕು.

d. ಫಲಕದ ಮೇಲೆ ಎಲೆಕ್ಟ್ರಿಕಲ್ ತಂತಿಗಳು (ಪ್ರಕಾಶಿತವಿದ್ದಲ್ಲಿ) ಅರ್ಥಿಂಗ್ (earthing) ಕುರಿತು ಮಾಹಿತಿಯನ್ನೊಳಗೊಂಡ, ಧೃಢೀಕೃತ ಪ್ರಮಾಣಪತ್ರವನ್ನು ವಿದ್ಯೂತ್ ಅಭಿಯಂತರರಿಂದ ಪಡೆಯಬೇಕು.

e. ಕೆಲಸಮಾಡುವುತ್ತಿರುವವರಿಗೆ ಅಪಾಯವಾದಲ್ಲಿ, ಹಾನಿ ಭರಿಸಲು ಮಾಡಬೇಕಾದ third party Insurance, ಇದನ್ನು ಫಲಕಕ್ಕೆ ಮಂಜೂರು ನೀಡಿದ ಮತ್ತು ಇದನ್ನು ಅಳವಡಿಸಿದ 45 ದಿನಗಳೊಳಗಾಗಿ ಜಾಹೀರಾತು ತೆರಿಗೆ ಪಾವತಿಯೊಂದಿಗೆ ಸಲ್ಲಿಸಬೇಕು.

f. ವಾಸಸ್ಥಳ ಅಥವಾ ವಾಣಿಜ್ಯ ಸ್ವತ್ತಿಗೆ ತೆರಿಗೆ ಪಾವತಿಸಿರುವ ಕಂದಾಯದ ರಸೀತಿಯು ನವೀಕರಣಕ್ಕಾಗಿ ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಸ್ವತ್ತಿನ ಮಾಲೀಕರು ನೀಡಿರುವ ನಿರಾಕ್ಷೇಪಣಾ ಪತ್ರ ಚಾಲ್ತಿಯಲ್ಲಿದ್ದಲ್ಲಿ ಮತ್ತು ಈಗಾಗಲೇ ಅನುಮತಿಸಿರುವ ಫಲಕವನ್ನು ಬದಲಾಯಿಸಲು ಅಥವಾ ಫಲಕದಲ್ಲಿ ಬದಲಾವಣೆ ಇಚ್ಚಿಸದಿದ್ದಲ್ಲಿ ನವೀಕರಣಕ್ಕಾಗಿ ಅರ್ಜಿ ಸಲ್ಲಿಸುವಾಗ ನಿರಾಕ್ಷೇಪಣಾ ಪ್ರಮಾಣಪತ್ರದ ಅವಶ್ಯಕತೆ ಇರುವುದಿಲ್ಲ.

(x) ಅನುಮೋದಿತ ಸ್ಥಳದಲ್ಲಿ ಅಳವಡಿಸಿರುವ ಜಾಹೀರಾತು ಫಲಕಗಳಿಗೆ ಸಂಬಂಧಿಸಿದಂತೆ ಏಜೆನ್ಸಿಯು ಧೃಢೀಕೃತ ಕಾಮಗಾರಿ ಅಭಿಯಂತರರಿಂದ, ವಿನ್ಯಾಸದ ಧೃಡತೆಯ ಕುರಿತು ಅಂದರೆ ಅವರಿಂದ ಸದರಿ ವಿನ್ಯಾಸಕ್ಕೆ ಉಪಯೋಗಿಸಿರುವ ವಸ್ತುಗಳು, ಫಲಕದ ಗಾತ್ರ ಮತ್ತು ಆಳತೆ ಇತ್ಯಾದಿ, ಅದರ ಆಧಾರಗಳು ಇವುಗಳ ಬಗ್ಗೆ ನೀಡಿರುವ ಪ್ರಮಾಣ ಪತ್ರವನ್ನು ಆಯುಕ್ತರಿಗೆ ಸಲ್ಲಿಸಬೇಕಾಗಿರುತ್ತದೆ. ಒಂದು ವೇಳೆ ಯಾವುದೇ ನ್ಯೂನ್ಯತೆ ಅಥವಾ ಕೊರತೆ ಕಂಡು ಬಂದಲ್ಲಿ ಅಥವಾ ಯಾವುದೇ ಸಮಯದಲ್ಲಿ ಗಮನಕ್ಕೆ ತಂದಲ್ಲಿ ಪಾಲಿಕೆಯು ಏಜೆನ್ಸಿಗೆ ನ್ಯೂನ್ಯತೆಯನ್ನು ಐದು ದಿನಗಳೊಳಗಾಗಿ ಸರಿಪಡಿಸುವಂತೆ ನಿರ್ದೇಶನ ನೀಡಬಹುದಾಗಿದೆ. ಒಂದು ವೇಳೆ ನ್ಯೂನ್ಯತೆಯನ್ನು ಸದರಿ ಅವಧಿಯಲ್ಲಿ ಸರಿಪಡಿಸದಿದ್ದಲ್ಲಿ ಪಾಲಿಕೆಯು ಫಲಕವನ್ನು ತೆಗೆದುಹಾಕಲು ಮತ್ತು ಇದಕ್ಕೆ ತಗಲುವ ವೆಚ್ಚವನ್ನು ತೆರಿಗೆಯೊಂದಿಗೆ ಏಜೆನ್ಸಿಯಿಂದ ವಸೂಲಿ ಮಾಡಲು ಆಗತ್ಯ ಕ್ರಮ ತೆಗೆದುಕೊಳ್ಳಬಹುದಾಗಿದೆ.

(xi) ಜಾಹೀರಾತು ಫಲಕವು ಒಂದು ವೇಳೆ ಪ್ರಕಾಶಿತವಿದ್ದಲ್ಲಿ, ಧೃಢೀಕೃತ ಸಹಾಯಕ ಅಭಿಯಂತರರು (ವಿದ್ಯುತ್) ಅಥವಾ ಬೆಸ್ಕಾಂ (BESCOM) ನಿಂದ ವಿದ್ಯುತ್ ಅಳವಡಿಸಿರುವುದರಿಂದ (ಸ್ಥಾಪನೆ) ಯಾವುದೇ ವಿದ್ಯುತ್ ಆಘಾತವಾಗದಿರುವ ಬಗ್ಗೆ ಪ್ರಮಾಣ ಪತ್ರವನ್ನು ಸಹ ಸಲ್ಲಿಸಬೇಕಾಗುತ್ತದೆ.

(xii) ರಸ್ತೆ ಸೇತುವೆಗಳ ಬದಿಯಲ್ಲಿ ಅಳವಡಿಸುವ ಫಲಕಗಳ ಆಧಾರಗಳ ಎತ್ತರವನ್ನು ರಸ್ತೆ ಸೇತುವೆಯ ಕಟ್ಟೆಯ ಗೋಡೆ (ಹಳಿ)ಗೆ ಸಮಾನಾಂತರವಾಗಿ ಏಕರೂಪವಾಗಿ ಒಂದೇ ರೇಖೆಯಲ್ಲಿ ಇರುವಂತೆ ಸೀಮಿತಗೊಳಿಸಬೇಕು.

(xiii) ಮೇಲ್ಛಾವಣಿಯ ಮೇಲೆ ಅಳವಡಿಸುವ ಫಲಕಗಳಿಗೆ ಸಂಬಂಧಿಸಿದಂತೆ, ಜಾಹೀರಾತುದಾರರು ಕಟ್ಟಡದ ಮತ್ತು ವಿನ್ಯಾಸದ ಧೃಡತೆಯ ಬಗ್ಗೆ ಪ್ರಮಾಣಪತ್ರವನ್ನು ಅರ್ಜಿಯೊಂದಿಗೆ ಸಲ್ಲಿಸಬೇಕು. ಇದನ್ನು ಒಬ್ಬ ಧೃಢೀಕೃತ ಅಭಿಯಂತರರಿಂದಲೇ ಮಾಡಿಸಬೇಕು. ಪಾಲಿಕೆಯು ನಿಯಮಿತವಾಗಿ ತಪಾಸಣೆ ಮಾಡತಕ್ಕದ್ದು ಮತ್ತು ಜಾಹೀರಾತು ಏಜೆನ್ಸಿಗೆ, ಫಲಕವನ್ನು ಸಮಂಜಸವಾಗಿ ಮತ್ತು ಸುರಕ್ಷಿತವಾದ ಸ್ಥಿತಿಯಲ್ಲಿರುವಂತೆ ನಿರ್ವಹಿಸಲು ನಿರ್ದೇಶಿಸಬೇಕು.

(xiv) ಪರವಾನಿಗೆಯನ್ನು ಪ್ರತಿ ಕ್ಯಾಲೆಂಡರ್ ಸಾಲಿನ 1ನೇಯ ಜುಲೈ ನಿಂದ 30 ಜೂನ್‌ರವರೆಗಿನ ಅವಧಿಗೆ ಮಂಜೂರು ಮಾಡಬೇಕು. ಸದರಿ ಅವಧಿಯಲ್ಲಿ ಅಥವಾ ಜುಲೈ 1ರ ನಂತರ ಸಲ್ಲಿಸಿರುವ ಅರ್ಜಿಗಳನ್ನು ವ್ಯವಹರಿಸಿ ಪರವಾನಿಗೆಯನ್ನು ಸದರಿ ಸಾಲಿನ ಜೂನ್ 30ರವರೆಗೆ ಚಾಲ್ತಿಯಲ್ಲಿರುವಂತೆ ಮಂಜೂರು ಮಾಡಲಾಗುವುದು.

(xv) ಎಲ್ಲಾ ಏಜೆನ್ಸಿಗಳು ಪರವಾನಿಗೆ ಅಂತ್ಯಗೊಳ್ಳುವ ಸಾಲಿನ ಮೇ 31 ರಂದು ಅಥವಾ ಅದಕ್ಕೂ ಪೂರ್ವದಲ್ಲಿ ನವೀಕರಣಕ್ಕಾಗಿ ನಿರ್ದಿಷ್ಟ ಅರ್ಜಿ ನಮೂನೆಯಲ್ಲಿ (ಅನುಬಂಧ-II) ಅರ್ಜಿ ಸಲ್ಲಿಸತಕ್ಕದ್ದು. ತದನಂತರ ಸಲ್ಲಿಸಿದ ಅರ್ಜಿಗಳಿಗೆ ಸಂಬಂಧಿಸಿದಂತೆ ಮೇ 31 ರಿಂದ ಜಾರಿಗೆ ಬರುವಂತೆ ಪರವಾನಿಗೆ ಅಂತ್ಯಗೊಳ್ಳುವ ಅವಧಿಯವರೆಗೆ ಪ್ರತಿ ತಿಂಗಳು ರೂ.5,000/-ದಂತೆ "ವಿಳಂಬಿತ ನವೀಕರಣ ಶುಲ್ಕ" ಪಾವತಿ ಮಾಡಬೇಕಾಗುತ್ತದೆ. ಆಯುಕ್ತರು ಜಾಹೀರಾತು ತೆರಿಗೆ ಪಡೆದು ನವೀಕರಣಕ್ಕಾಗಿ ಸಲ್ಲಿಸಿರುವ ಎಲ್ಲಾ ಅರ್ಜಿಗಳನ್ನು ಪರಿಗಣಿಸಬಹುದಾಗಿದೆ.

ಆದರೆ ಪಾಲಿಕೆಯ ಸ್ಥಾಯಿ ಸಮಿತಿಯು ಯಾವುದೇ ಫಲಕ ಅಥವಾ ಫಲಕಗಳನ್ನು ಎರಡು ವರ್ಷಗಳಿಗಿಂತ ಹೆಚ್ಚಿನ ಅವಧಿಗೆ ನವೀಕರಿಸಿದಲ್ಲಿ, ನವೀಕರಣ ಅಂತ್ಯಗೊಳ್ಳುವ ವರ್ಷದ ಮೇ 31ನೇ ದಿನಾಂಕದಂದು ನವೀಕರಣಕ್ಕಾಗಿ ಅರ್ಜಿಯನ್ನು ಸಲ್ಲಿಸಬೇಕು. ಹೇಗಿದ್ದರೂ ಜಾಹೀರಾತು ತೆರಿಗೆಯನ್ನು ವಾರ್ಷಿಕ ಅಥವಾ ಅರ್ಧ ವಾರ್ಷಿಕವಾಗಿ ಸಲ್ಲಿಸುವುದು.

